# ಶ್ರೀರಾಘವೇಂದ್ರವಿಜಯ

ಸಂಪುಟ - 1

## ಸರ್ಗ 1




ಪ್ರಕಾಶಕರು:
ಶ್ರೀಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠ
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ

|| ಶ್ರೀಮೂಲರಾಮೋ ವಿಜಯತೇ ||  || ಶ್ರೀಗುರುರಾಜೋ ವಿಜಯತೇ ||



ಸ್ವಸ್ತಿಶ್ರೀ ವಿಜಯಾಭ್ಯುದಯ ಗತ ಶಾಲಿವಾಹನ ಶಕ 1932 ನೇ
ವಿಕೃತಿನಾಮ ಸಂವತ್ಸರ ಮಾಘ ಬಹುಳ ದಶಮಿ, ದಿನಾಂಕ 27-2-2011 ಭಾನುವಾರ.

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣಪಾರಂಗತ
ಸರ್ವತಂತ್ರ ಸ್ವತಂತ್ರ ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ ಶ್ರೀಮನ್ಮೂಲರಘುಪತಿವೇದವ್ಯಾಸದೇವರ
ದಿವ್ಯಶ್ರೀಪಾದಪದ್ಮಾರಾಧಕ ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನಾಧೀಶ್ವರರಾದ
ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತ ಸಾಮ್ರಾಜ್ಯ ದಿಗ್ವಿಜಯ ವಿದ್ಯಾಸಿಂಹಾಸನಾಧೀಶ್ವರರಾದ
ಶ್ರೀಮತ್ಸುಜಯೀಂದ್ರತೀರ್ಥಶ್ರೀಪಾದಂಗಳವರ ಕರಕಮಲಸಂಜಾತರಾದ

**ಶ್ರೀ 108 ಶ್ರೀಮತ್ಸುಶಮೀಂದ್ರತೀರ್ಥಶ್ರೀಪಾದಂಗಳವರ ವರಕುಮಾರಕರಾದ**

## ಶ್ರೀ 108 ಶ್ರೀಸುಯತೀಂದ್ರತೀರ್ಥಶ್ರೀಪಾದಂಗಳವರು

ಶ್ರೀಗುರುರಾಜರ ಪೂರ್ವಾಶ್ರಮದ ಅಕ್ಕಂದಿರ ಮಕ್ಕಳಾದ ಶ್ರೀನಾರಾಯಣಾಚಾರ್ಯರು ಷಟ್‌ಶಾಸ್ತ್ರ-ಪಾರಂಗತರು ಮಹಾಕವಿಗಳೆಂದು ಪ್ರಸಿದ್ಧರಾದವರು. ಸ್ವತಃ ಶ್ರೀರಾಘವೇಂದ್ರತೀರ್ಥರಲ್ಲಿ ಅಧ್ಯಯನ ಮಾಡಿದ ಅವರ ಪಾಂಡಿತ್ಯದ ಬಗ್ಗೆ ಎರಡನೇ ಮಾತಿಲ್ಲ. ಇವರು ರಚಿಸಿದ ಶ್ರೀರಾಘವೇಂದ್ರವಿಜಯವು ಮಹಾಕಾವ್ಯದಲ್ಲಿ ಸೇರುತ್ತದೆ. ವಿವಿಧ ಛಂದಸ್ಸುಗಳಿಂದ ಅಲಂಕೃತವಾದ ಈ ಕಾವ್ಯವು ಅನೇಕ ಶಾಸ್ತ್ರವಿಷಯಗಳನ್ನೊಳಗೊಂಡಿದೆ. ಈ ಹಿಂದೆ ನಮ್ಮ ಪರಮಗುರುಗಳ ಕಾಲದಲ್ಲಿ ಈ ಕಾವ್ಯವು ಎರಡು ವ್ಯಾಖ್ಯಾನಗಳಿಂದ ಕೂಡಿ ಮುದ್ರಿತವಾಗಿತ್ತು. ಈ ಕಾವ್ಯದ ಅನುವಾದವನ್ನು ನಮ್ಮ ಶ್ರೀಮಠದ ಅಭಿಮಾನಿ ವಿದ್ವಾಂಸರಾದ ಎಸ್. ವಿ. ಭೀಮಭಟ್ಟರು ಮಾಡಿದ್ದರು. ಅದನ್ನು ನಮ್ಮ ಕನ್ನಡ ಗುರುಸಾರ್ವಭೌಮ ಮಾಸಪತ್ರಿಕೆಯಲ್ಲಿ ಧಾರಾವಾಹಿ ರೂಪದಲ್ಲಿ ಪ್ರಕಟಗೊಂಡಿತ್ತು. ಅದನ್ನು ಈಗ ಪ್ರತ್ಯೇಕವಾಗಿ ಒಂದು ಪುಸ್ತಕರೂಪದಲ್ಲಿ ಮುದ್ರಿಸಿ ಪ್ರಕಾಶಪಡಿಸುತ್ತಿರುವುದು ಸಂತಸವಾಗಿದೆ. ಶ್ರೀಗುರುರಾಜರ ನೈಜಚರಿತ್ರೆಯನ್ನು ಅವರ ಸಮಕಾಲೀನರಾದ ಶ್ರೀನಾರಾಯಣಾಚಾರ್ಯರು ತುಂಬಾ ಸ್ವಾರಸ್ಯವಾಗಿ ರಚಿಸಿರುತ್ತಾರೆ. ಅಧ್ಯೇತೃಗಳು ಅದರ ಸದುಪಯೋಗವನ್ನು ಪಡೆದುಕೊಳ್ಳಲೆಂದು ಹಾರೈಸುತ್ತಾ ಈ ಕಾವ್ಯದ ಅಧ್ಯಯನದಿಂದ ಶ್ರೀಗುರುರಾಜರಲ್ಲಿ ಭಕ್ತಿಯು ಅಭಿವೃದ್ಧವಾಗಿ ತನ್ಮೂಲಕ ಶ್ರೀಭಗವಂತನ ಪರಮಾನುಗ್ರಹವಾಗಲೆಂದು ಶ್ರೀರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣ-ಮುಖ್ಯಪ್ರಾಣಾಂತರ್ಗತ ಶ್ರೀಮೂಲರಘುಪತಿವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.



॥ ಶ್ರೀಃ ॥

# ಶ್ರೀರಾಘವೇಂದ್ರವಿಜಯ

## ಸಂಪುಟ - 1

## ಸರ್ಗ 1

ಅನುವಾದಕರು:

ಶ್ರೀರಾಘವೇಂದ್ರಾನುಗ್ರಹಪ್ರಶಸ್ತಿವಿಜೇತರು

**ದಿ॥ ವಿದ್ವಾನ್ ಎಸ್. ವಿ. ಭೀಮಭಟ್ಟರು**



ಪ್ರಕಾಶಕರು:

ಶ್ರೀಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠ

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ

ಶ್ರೀರಾಘವೇಂದ್ರಸ್ವಾಮಿಗಳವರ ಮಠ, ಮಂತ್ರಾಲಯ

# ಪ್ರಸ್ತಾವನೆ

ಅಂತಹದೊಂದು ಕಾವ್ಯ ಸಂಸ್ಕೃತ ಕಾವ್ಯಪ್ರಪಂಚದಲ್ಲಿಯೇ ಅಪರೂಪ.

ಆಗ ತಾನೇ ಉದಯಿಸಿದ ಸೂರ್ಯನಂತೆ ಬೆಳಕು ಚೆಲ್ಲುತ್ತದೆ. ಶ್ರೀರಾಯರ ಪೂರ್ವಾಶ್ರಮದ ವಂಶ, ತಾತ-ಮುತ್ತಾತಂದಿರು, ಅಪ್ಪ-ಅಮ್ಮನ ಪರಿಚಯ ಎಳೆ ಎಳೆಯಾಗಿ ಬಿಚ್ಚಿಕೊಳ್ಳುತ್ತದೆ. ವೇಂಕಟನಾಥರ ಬಾಲ್ಯ-ಲೀಲೆಗಳು, ಶಾಸ್ತ್ರದ ಅಭಿರುಚಿ, ಸದಾಚಾರದ ಪಾಲನೆ, ಧರ್ಮದಲ್ಲಿನ ನಿಷ್ಠೆ ಮನಸ್ಸನ್ನು ತಟ್ಟುತ್ತದೆ.

ತಂದೆಯವರ ವಿಯೋಗ - ಮದುವೆಯ ನಂತರ ಒಂದರ ಮೇಲೊಂದರಂತೆ ಬಂದೊದಗಿದ ಕಷ್ಟಗಳು ಹಾಗೂ ಅದನ್ನು ಧೈರ್ಯವಾಗಿ ಎದುರಿಸಿದ, ಯಾವ ಹರಿಶ್ಚಂದ್ರ ಮಹಾರಾಜನಿಗೂ ಕಡಿಮೆಯಿಲ್ಲದಂತೆ ತೋರಿದ ಧೀರೋದಾತ್ತ ಗುಣ, ಪೂರ್ವಾಶ್ರಮದಲ್ಲಿಯೇ ರಾಯರಿಗೆ ಹೃದಯ ಸಾಮ್ರಾಜ್ಯ ಪಟ್ಟಾಭಿಷೇಕ ಮಾಡಿಸುತ್ತವೆ.

ಕುಂಭಕೋಣದ ವರ್ಣನೆಯೇ ಅದ್ಭುತ. ಕವಿ ಇಲ್ಲಿ ತೀರಾ ಲೀಲಾಜಾಲಮಾಗಿ ಓಡಾಡುತ್ತಾರೆ. ಕಣ್ಮುಂದೆ ಕುಂಭಕೋಣವನ್ನು ತಂದಿಡುತ್ತಾರೆ. ಆಗಿನ ಕಾಲದ ಸಂಸ್ಕೃತ ಭಾಷೆಯ ಮೇಲಿನ ಅಭಿರುಚಿ, ದರ್ಶನಗಳ ಆರೋಗ್ಯಕರ ವಾದ-ವಿವಾದಗಳು, ಆಧ್ಯಾತ್ಮಿಕತೆಯ ಮೇಲ್ಮಟ್ಟದ ಆಸಕ್ತರ ಅಭಿರುಚಿಯನ್ನು ಸೊಗಸಾಗಿ ಅಭಿವ್ಯಕ್ತಿ-ಗೊಳಿಸುತ್ತದೆ.

ಐತಿಹಾಸಿಕ ಸಂಗತಿಗಳು, ಚರಿತ್ರೆಯ ಆಕರಗಳು ''ಇನ್ನೂ ಇವೆಯಾ ?'' ಎನ್ನುವಷ್ಟರ ಮಟ್ಟಿಗೆ ತುಳು-ಕಾಡುತ್ತಿವೆ. ಒಬ್ಬ ನಾಗರೀಕ ಸಮಾಜದ ತಂದೆ ಹೀಗಿರಬೇಕೆಂಬುದಕ್ಕೆ ಇಲ್ಲಿನ ವೇಂಕಟನಾಥರು ಆದರ್ಶ. ಸರಳತನ, ಗುಣಮಟ್ಟದ ಉನ್ನತ ಶಿಕ್ಷಣ, ಉದ್ಗ್ರಂಥಗಳ ಕರ್ತೃವಿನ ರೂವಾರಿಯಾಗಿ ಲಕ್ಷ್ಮೀನಾರಾಯಣಾಚಾರ್ಯರನ್ನು ತೋರಿಸುತ್ತಾರೆ. ಹಣಕಾಸಿನ ವ್ಯವಸ್ಥೆಯಲ್ಲಿ ಏರುಪೇರಾದಾಗ ಬೇರೆ ಮಾರ್ಗಕ್ಕೆ ಹೋಗದೇ ತಾಳ್ಮೆಯಿಂದ ಧರ್ಮದ ಹಾದಿಯಲ್ಲೇ ನಡೆದು ವಿಜಯದ ಶಿಖರ ಮುಟ್ಟಿದರು.

ಶ್ರೀಸುಮಧ್ವವಿಜಯಕ್ಕೂ - ಶ್ರೀರಾಘವೇಂದ್ರವಿಜಯಕ್ಕೂ ಅನೇಕ ಸಾಮ್ಯಗಳಿವೆ -

| ಶ್ರೀಸುಮಧ್ವವಿಜಯ | ಶ್ರೀರಾಘವೇಂದ್ರವಿಜಯ |
|---|---|
| 1. ಸಮಕಾಲೀನ ಕೃತಿ | 1 ಸಮಕಾಲೀನ ಕೃತಿ |
| 2. ಕರ್ತೃ : ಶ್ರೀಮನ್ನಾರಾಯಣಾಚಾರ್ಯ | 2 ಕರ್ತೃ : ನಾರಾಯಣಾಚಾರ್ಯ |
| 3. ಐತಿಹಾಸಿಕ ಆಕರಗಳಿವೆ | 3 ಚರಿತ್ರೆಯ ಮೇಲೆ ಬೆಳಕು ಚೆಲ್ಲುವ ಅಂಶಗಳು |
| 4. ಧೀರೋದಾತ್ತ ಸಂತನ ವರ್ಣನೆ | 4 ಮಧ್ವವಂಶದ ಮಹನೀಯನ ಜೀವನ ನಿರೂಪಣೆ |
| 5. 16 ಸರ್ಗದಷ್ಟು ಬೃಹತ್ ಕಾವ್ಯ | 5 ಶ್ರೀಸುಮಧ್ವವಿಜಯದ ಗೌರವದಿಂದ 10 ಸರ್ಗಕ್ಕೆ ಮಿತಿಗೊಳಿಸಿದ ವಿನಯವಂತ ಕಾವ್ಯ. |
| 6. ನಾಲ್ಕಕ್ಕೂ ಹೆಚ್ಚು ವ್ಯಾಖ್ಯಾನಗಳಿವೆ. | 6 ಎರಡಕ್ಕೂ ಹೆಚ್ಚು ವ್ಯಾಖ್ಯಾನಗಳಿವೆ. |

| | |
|---|---|
| 7. ಆಶ್ಚರ್ಯವೆಂದರೆ, ಶ್ರೀರಾಘವೇಂದ್ರವಿಜಯದ ಕರ್ತೃ ಶ್ರೀನಾರಾಯಣಾಚಾರ್ಯರ ಅನುಜರಾದ ಶ್ರೀಆನಂದತೀರ್ಥಾಚಾರ್ಯರ ಶ್ರೀಸುಮಧ್ವವಿಜಯ ವ್ಯಾಖ್ಯಾನ ಉಪಲಬ್ಧ (ಅಪ್ರಕಟಿತ). | 7. ಶ್ರೀಸುಮತೀಂದ್ರತೀರ್ಥರ ವ್ಯಾಖ್ಯಾನ ಇದಕ್ಕಿದೆ ಎಂಬ ಪ್ರತೀತಿ. |
| 8. ಉಡುಪಿ – ಬದರಿಯ ವರ್ಣನೆ.<br>ತೀರ್ಥ–ಕ್ಷೇತ್ರಗಳ ಸಂಚಾರಕ್ರಮ. | 8. ಕುಂಭಕೋಣ – ಶ್ರೀಮುಷ್ಣಂ ಕ್ಷೇತ್ರದ ವರ್ಣನೆ.<br>ಸಂಚಾರಕ್ರಮದ ಯಥಾವತ್ ನಿರೂಪಣೆ. |
| 9. ಸಾಹಿತ್ಯಾಸಕ್ತರೆಲ್ಲರಿಗೂ ಇಷ್ಟವಾಗುವ ಕಾವ್ಯ. | 9. ಸಂಸ್ಕೃತ ಸಾಹಿತ್ಯ ಅಧ್ಯಯನಶೀಲರಿಗೆ ಮೆಚ್ಚುಗೆಯಾಗುವ ಕಾವ್ಯ. |
| 10. ಇನ್ನೂ ಜನಪ್ರಿಯ. | 10. ಶ್ರೀಸುಮಧ್ವವಿಜಯ ಬಿಂಬವಾದರೆ,<br>ಶ್ರೀರಾಘವೇಂದ್ರವಿಜಯ ಪ್ರತಿಬಿಂಬ.<br>ಅದರ ಪಡಿಯಚ್ಚು.<br>ಹಾಗಾಗಿ ರಾಯರ ಭಕ್ತರಿಗೆ ಅಚ್ಚುಮೆಚ್ಚು. |

ಶ್ರೀರಾಘವೇಂದ್ರವಿಜಯ ಕಾವ್ಯವನ್ನು ಮಂತ್ರಾಲಯದ ಶ್ರೀಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠದಿಂದ ಎರಡು ವ್ಯಾಖ್ಯಾನಗಳ ಸಮೇತ ಪ್ರಕಟಿಸಲಾಗಿದೆ. ಇದು ಶ್ರೀಗುರುಸಾರ್ವಭೌಮ ಪತ್ರಿಕೆಯಲ್ಲಿ ಕ್ರಿ.ಶ. 1979 ರಿಂದ 1982 ವರೆಗೆ ಧಾರಾವಾಹಿಯಾಗಿ ಪ್ರಕಟಗೊಂಡು ಅಪಾರ ಜನಮನ್ನಣೆ ಗಳಿಸಿತ್ತು. ಶ್ರೀಮಠದ ರಾಘವೇಂದ್ರಾನುಗ್ರಹಪ್ರಶಸ್ತಿ ವಿಜೇತರು ವಿದ್ವಾನ್ ದಿ॥ ಸಾಣೂರು ಭೀಮಭಟ್ಟರು ಇದಕ್ಕೆ ಮನಸ್ಸಿಗೆ ತೃಪ್ತಿಯಾಗುವಂತೆ ಅನುವಾದ ಮಾಡಿದ್ದರು. ಆ ಧಾರಾವಾಹಿಗಳು ಗ್ರಂಥದ ರೂಪ ತಳೆದು ಸುಂದರವಾಗಿ ನಿಮ್ಮ ಕೈ ಸೇರುತ್ತಿವೆ.

ಶ್ರೀ ರಾಘವೇಂದ್ರ ವಿಜಯದ ಬಗ್ಗೆ ಹೀಗೊಂದಿಷ್ಟು ಮಾಹಿತಿಗಳು :

ಶ್ರೀ ರಾಘವೇಂದ್ರ ವಿಜಯಕ್ಕೆ ಉಪಲಬ್ಧವಿರುವ ಎರಡು ವ್ಯಾಖ್ಯಾನಗಳು. ಒಂದು ಬಾಲಬೋಧಿನೀ ವ್ಯಾಖ್ಯಾನ, ಇದರ ಕರ್ತೃ ದೇಶಿಕ ಗೋಪಾಲಕೃಷ್ಣಾಚಾರ್ಯ ಶಿಷ್ಯ ಶ್ರೀ ರಾಮಾಚಾರ್ಯರು. ಎರಡನೇಯದು ಶ್ರೀಗುರುಪಾದಸೇವಾ ವ್ಯಾಖ್ಯಾನ. ಇದರ ಕರ್ತೃ ನ್ಯಾಯಾಲಯ ಪಂಡಿತ (ಕೋರ್ಟ್) ರಾಘವೇಂದ್ರಾಚಾರ್ಯ. ಇವರಿಬ್ಬರ ಕಾಲ ಸರಿಸುಮಾರು ಕ್ರಿಸ್ತ ಶಕ 1825 ರಿಂದ 1875ರ ವವೆಗೆ. ಪ್ರಸ್ತುತ ಈ ಎರಡು ವ್ಯಾಖ್ಯಾನಗಳ ಹಸ್ತಪ್ರತಿಗಳು ಕೊಪ್ಪಳದಲ್ಲಿವೆ.

ಸುಮಧ್ವವಿಜಯಕ್ಕೆ ಅಣುಮಧ್ವವಿಜಯವಿರುವಂತೆ ರಾಘವೇಂದ್ರವಿಜಯಕ್ಕೆ ಅಣುರಾಘವೇಂದ್ರವಿಜಯವಿದೆ. ಇದರ ಕರ್ತೃ ಅರ್ಚಕ ವೇದವ್ಯಾಸಾಚಾರ್ಯ. ಐದು ಸರ್ಗದ ಈ ಪುಟ್ಟ ಕಾವ್ಯದಲ್ಲಿ ವಿಚಾರಯೋಗ್ಯ ಮಾಹಿತಿಗಳಿವೆ.

ಸಂಸ್ಕೃತ ಭಾಷೆಯಲ್ಲಿರುವ ಶ್ರೀ ರಾಘವೇಂದ್ರರ ಕುರಿತಾದ ಮತ್ತೆರಡು ಕಾವ್ಯಗಳು :

1. ಶ್ರೀರಾಘವೇಂದ್ರಗುರುಸಾರ್ವಭೌಮಸಪ್ತರಾತ್ರೋತ್ಸವಚಂಪೂ – ವಿದ್ಯಾರತ್ನಂ ಪಂಚಮುಖಿ ಶ್ರೀ ರಾಘವೇಂದ್ರಾಚಾರ್ಯ, ಕರ್ನಾಟಕ ಇತಿಹಾಸ ಮಂಡಲಿ, ಧಾರರಾಡದಿಂದ 1977 ರಲ್ಲಿ ಪ್ರಕಟಿತ. 14 ಉಲ್ಲಾಸಗಳ ಈ ಕಾವ್ಯ ಮನೋಹರವಾಗಿದ್ದು ಕನ್ನಡಕ್ಕೆ ಅನುವಾದಿಸಿದಲ್ಲಿ ಭಕ್ತರಿಗೆ ಆಸ್ವಾದಿಸಲು ಅನುಕೂಲವಾಗುವುದು.

2. 1992 ರಲ್ಲಿ ಶ್ರೀಮದ್ರಾಘವೇಂದ್ರಗುರುವೈಭವಕಾವ್ಯಂ ಹೆಸರಿನಲ್ಲಿ ಶ್ರೀ ರಾಯರ ಕುರಿತಾದ ಈ ಕೃತಿ ಶ್ರೀ ಮಾಧ್ವಗುರುವೈಭವ ಪ್ರಕಾಶನದಿಂದ ಪ್ರಕಟಿತವಾಗಿದೆ. ಗ್ರಂಥಕರ್ತೃಗಳು ಪಂ. ಹನುಮೇಶಾಚಾರ್ಯ ಜಾಲಿಹಾಳ. ಇದು ಹದಿನೈದು ಸರ್ಗಗಳನ್ನೊಳಗೊಂಡಿದೆ.

1929 ರಲ್ಲಿ ಬೇಲೂರು ಕೇಶವದಾಸರು ಶ್ರೀ ರಾಯರ ಕುರಿತಾದ ಕೃತಿ ರಚಿಸಿದ್ದು , ಅದು ಐದಕ್ಕೂ ಹೆಚ್ಚು ಬಾರಿ ಮುದ್ರಣಗೊಂಡಿದೆ. ಅದರ ಹೆಸರು ಶ್ರೀರಾಘವೇಂದ್ರ ವಿಜಯ.

1946 ನಲ್ಲಿ ಆರ್. ಎ. ಕಾಟಗೇರಿ ಬಿ.ಎ. ಅವರು ಶ್ರೀ ರಾಘವೇಂದ್ರ ವಿಜಯ ಎನ್ನುವ ಇಂಗ್ಲಿಷ್ ಭಾಷೆ-ಯಲ್ಲಿನ ಕೃತಿಯನ್ನು ರಚಿಸಿದ್ದು ಪುಣೇ ನಗರದಿಂದ ಇದು ಪ್ರಕಾಶಿತವಾಗಿದೆ.

1958 ಶ್ರೀ ಪರಿಮಲ ಗ್ರಂಥ ಪ್ರಕಾಶನದಿಂದ ವಿದ್ವಾನ್ ರಾಜಾ ಎಸ್. ಗುರುರಾಜಾಚಾರ್ಯರು ಸಂಪಾದಿಸಿ ತಂದ ''ಶ್ರೀಮದ್ರಾಘವೇಂದ್ರವಿಜಯಃ'' ಪ್ರಾಯಃ ಮೊಟ್ಟ ಮೊದಲ ಶುದ್ಧಪ್ರತಿ ಇರಬೇಕು. (ಶ್ರೀಸುಯಮೀಂದ್ರ-ತೀರ್ಥರ ಕಾಲ).

ಶ್ರೀ ರಾಘವೇಂದ್ರಸ್ವಾಮಿ ವೃಂದಾವನ ಕಾರ್ಯಾಲಯದಿಂದ ಎರಡು ವ್ಯಾಖ್ಯಾನ ಸಮೇತ ಐದು - ಆರು ಭಾಗಗಳಲ್ಲಿ ರಾಘವೇಂದ್ರ ವಿಜಯ ಪ್ರಕಾಶನಗೊಂಡಿದ್ದು ದ್ವಿತೀಯ ಬಾರಿ. (ಶ್ರೀಸುಜಯೀಂದ್ರತೀರ್ಥರ ಕಾಲ).

ಶ್ರೀ ರಾಘವೇಂದ್ರ ವಿಜಯದ ಕನ್ನಡ ಪದ್ಯಾನುವಾದ ಭಾಮಿನಿ ಷಟ್‌ಪದಿಯಲ್ಲಿ ಶ್ರೀ ಯಲಮೇಲಿ ಕೃಷ್ಣಮೂರ್ತ್ಯಾಚಾರ್ಯರು 1982 ನಲ್ಲಿ ಮಾಡಿರುತ್ತಾರೆ.

ಬಿ. ಎಸ್ ಕೌಶಿಕ್‌ರವರ ''ಶ್ರೀ ಗುರುರಾಘವೇಂದ್ರವಿಜಯಸಂಗ್ರಹ'' ಎಂಬ ಕನ್ನಡ ಕಾವ್ಯ ಭಾಮಿನಿ ಷಟ್‌ಪದಿಯಲ್ಲಿ 1000 ಪದ್ಯಗಳಿಂದ ಕೂಡಿದ್ದು ಅದರಲ್ಲಿ ಕೆಲವು ಭಾಗ ಮಾತ್ರ ಪ್ರಕಾಶಿತವಾಗಿದೆ.

ಕೋಸಗಿ ಸ್ವಾಮಿರಾಯಾಚಾರ್ಯರು (ಗುರುಜಗನ್ನಾಥದಾಸರು - ಕ್ರಿ.ಶ. 1871) ''ಶ್ರೀರಾಘವೇಂದ್ರ ವಿಜಯ ಪದ್ಯರತ್ನಮಾಲಾ'' ಎಂಬ ಹೆಸರಿನಲ್ಲಿ ಕೃತಿ ರಚಿಸಿದ್ದು ಅದರಲ್ಲಿ 53 ಪದ್ಯಗಳಿವೆ. ನಾಡಿನ ವಿವಿಧ ಕಡೆ ಪ್ರತಿನಿತ್ಯ ಪಾರಾಯಣಮಾಡಲಾಗುತ್ತಿದೆ. 1971 ನಲ್ಲಿ ಕೌತಾಳಂ ನಿಂದ ಪ್ರಕಟಿತ.

ಇಂಗ್ಲೀಷ್ ಅವತರಣಿಕೆಯನ್ನು ಶ್ರೀ ಜಿ.ಬಿ. ಜೋಷಿ, ಗದಗ್‌ನಿಂದ (1968) ರಲ್ಲಿ ಮಾಡಿದ್ದಾರೆ. ತಮಿಳು ಭಾಷೆಗೆ ಕೊಂಡೊಯ್ದವರು ಶ್ರೀಮುಷ್ಣಂನ ಶ್ರೀ ವಿ. ನಾಗರಾಜಾಚಾರ್ಯರು - ಶ್ರೀರಂಗಂ (1998). ಇದಕ್ಕೂ ಮುಂಚೆ ಮೂಲ ಮಾತ್ರ ತಮಿಳಿನಲ್ಲಿ 1992 ರಲ್ಲಿ ಮುದ್ರಿತವಾಗಿದೆ.

ಶ್ರೀ ಪರಿಮಳ ಮಾಸಪತ್ರಿಕೆಯಲ್ಲಿ ಶ್ರೀರಾಘವೇಂದ್ರಗುರುವಂಶಭೂಷಣರಾದ ಶ್ರೀ ರಾಜಾ. ಗುರುರಾಜಾ-ಚಾರ್ಯರು ಮತ್ತು ವಿದ್ವಾನ್. ರಿತ್ತಿ ವೆಂಕಣ್ಣಾಚಾರ್ಯರೂ ಕೂಡಾ ಬಹುಶಃ ಆರು ಸರ್ಗದವರೆಗೆ ಅತ್ಯುತ್ತಮ-ವಾದ ಅನುವಾದ ಮಾಡಿದ್ದರು. ಕಲಿಯುವವರಿಗೆ ಅತಿ ಉಪಯುಕ್ತವಾಗಿದೆ.

ಶ್ರೀಸುಯಮೀ-ರಾಘವೇಂದ್ರ ಪ್ರಕಾಶನದಿಂದ ದಪ್ಪ ಅಕ್ಷರಗಳಲ್ಲಿ ಶ್ರೀರಾಘವೇಂದ್ರವಿಜಯ ಮುದ್ರಿತ-ವಾಗಿದ್ದು ಪಾರಾಯಣ ಪ್ರಿಯರಿಗೆ ಅನುಕೂಲ ಮಾಡಿಕೊಟ್ಟಿದ್ದಾರೆ. ಶ್ರೀರಾಘವೇಂದ್ರವಿಜಯದ ಬಗ್ಗೆ 40 ಕ್ಕೂ ಹೆಚ್ಚು ಬಿಡಿ ಬಿಡಿ ಲೇಖನಗಳಿದ್ದರೂ ಅದರಲ್ಲಿ ಇತ್ತೀಚಿನ ದಿನಗಳಲ್ಲಿ ಹೆಚ್ಚು ಇಷ್ಟವಾಗುವುದು ಶ್ರೀ ಪಿ. ವಿ. ಹರಿನಾಥ್‌ರವರು ಬರೆದ ಶ್ರೀರಾಘವೇಂದ್ರಗ್ರಂಥಮುಕ್ತಾವಲೀಯಲ್ಲಿನ ಲೇಖನ. ಅದನ್ನೇ ಕಿರುಪುಸ್ತಕವನ್ನಾಗಿ

ಮಾಡಬಹುದು. ಜೇನಿನ ಗೂಡಿನಿಂದ ಮಧುರವಾದ ಮಧುವನ್ನು ತಂದಂತೆ ಕೂಡಿಸಿಕೊಟ್ಟಿದ್ದಾರೆ. ಯುವ ವಿದ್ವಾಂಸರಾದ ಶ್ರೀಹರಿಯವರಿಗೆ ಬರವಣಿಗೆಯ ಕಲೆ ಸಿದ್ಧಿಸಿದೆ.

ಶ್ರೀರಾಘವೇಂದ್ರವಿಜಯ ಗ್ರಂಥದ ಮೇಲಿನ ಅಧ್ಯಯನಕ್ಕಾಗಿ ವಿದ್ವಾನ್ ಕೋಡಂಗಲ್ ರಾಘವೇಂದ್ರಾ-ಚಾರ್ಯರಿಗೆ ಡಾಕ್ಟರೇಟ್ (ಪಿ.ಹೆಚ್.ಡಿ.) ದೊರೆತಿದೆ.

ಶ್ರೀರಾಘವೇಂದ್ರವಿಜಯ ಧ್ವನಿಸುರುಳಿಯಲ್ಲಿ ಕೂಡಾ ಬಂದುಹೋಗಿದೆ. ವಿದ್ಯಾಭೂಷಣರ ಸಿರಿಕಂಠದಲ್ಲಿ ವಿದ್ಯಾವಾಚಸ್ಪತಿ ಬನ್ನಂಜೆ ಗೋವಿಂದಾಚಾರ್ಯರ ಸಾರಾಂಶ ನಿರೂಪಣೆಯಲ್ಲಿ ಮಂತ್ರಾಲಯ ಶ್ರೀಮಠದಿಂದ ನಿರ್ಮಿತ.

ಡಾ. ರಾಜಕುಮಾರ್‌ರ ಚಲನಚಿತ್ರ ಜೀವನದಲ್ಲಿ ಅತ್ಯಂತ ತೃಪ್ತಿ ಹಾಗೂ ಕೀರ್ತಿ ಕೊಟ್ಟ ಚಿತ್ರ ''ಮಂತ್ರಾಲಯ ಮಹಾತ್ಮೆ'' ಅಥವಾ ''ಶ್ರೀರಾಘವೇಂದ್ರವಿಜಯ''.

ಶ್ರೀರಾಘವೇಂದ್ರವಿಜಯ ಹೆಸರಿನ ಮಾಸಪತ್ರಿಕೆ ಶ್ರೀಸುಶಮೀಂದ್ರ ಸೇವಾ ಪ್ರತಿಷ್ಠಾನದಿಂದ ಪ್ರಕಾಶನ-ಗೊಳಿಸುತ್ತಿದೆ. ಮಂತ್ರಾಲಯದ ಶ್ರೀಮಠದಿಂದ ಪ್ರಕಟವಾದ ಶ್ರೀರಾಘವೇಂದ್ರವಿಜಯ ಮತ್ತೊಂದು ಕನ್ನಡದ ಅನುವಾದ ವಿದ್ವಾನ್. ಆನಂದತೀರ್ಥಾಚಾರ್ಯ ಪಂಚಮುಖೀ ಮತ್ತು ವಿದ್ವಾನ್ ರಾಜಾ. ಪವಮಾನಾ-ಚಾರ್ಯರ ಸಂಪಾದಕತ್ವದಲ್ಲಿ ಸೊಗಸಾಗಿ ಮೂಡಿಬಂದಿದೆ. ಪ್ರಾಯಃ ಎರಡು ಮುದ್ರಣ ಕಂಡಿದೆ. ಹೀಗಿದ್ದೂ ಪುಸ್ತಕ ಭಂಡಾರದಲ್ಲಿ ಶ್ರೀರಾಘವೇಂದ್ರವಿಜಯ ಕೃತಿ ಸಿಗುತ್ತಿಲ್ಲ. ಜನರಿಗೆ ಬೇಕಾದ ಅತೀ ಬೇಡಿಕೆಯ ಸಾರ್ವಕಾಲಿಕ ಕೃತಿ ಇದು. ಇದನ್ನು ಮನಗಂಡು ಆತ್ಮೀಯ ಸಹೋದರರಾದ ಶ್ರೀಸುಯಮೀಂದ್ರಾಚಾರ್ಯರ ಹೆಚ್ಚುವರಿ ಆಪ್ತ ಕಾರ್ಯದರ್ಶಿಗಳಾದ ರಾಜಾ. ಸೂರೀಂದ್ರಾಚಾರ್ಯರು ಮತ್ತೊಮ್ಮೆ ಅಕ್ಷರದ ತೆರೆಯಲ್ಲಿ ಶ್ರೀರಾಘವೇಂದ್ರ-ವಿಜಯವನ್ನು ತರುತ್ತಿದ್ದಾರೆ. ಬಹುಶಃ ಬಿಡುಗಡೆಯಾದ ಒಂದು ವಾರದಲ್ಲೇ ಎಲ್ಲಾ ಪ್ರತಿಗಳೂ ಖಾಲಿಯಾಗುವ ಅಪಾರ ಸಹಜ ನಿರೀಕ್ಷೆ.

ಕಾರಣ, ಈ ಬಾರಿ ಇದಕ್ಕೆ ಕೈಗೂಡಿಸಿದವರು ಸ್ವತಃ ವಿದ್ವಾಂಸರಾದ ಉತ್ತಮ ಮುದ್ರಕರಾದ ಗೆಳೆಯ, ಶ್ರೀ ಧನಂಜಯಾಚಾರ್ಯ ವರ್ಖೇಡಿಯವರು. ಉತ್ತರಾದಿಮಠದವರಾದರೂ ಶ್ರೀರಾಯರಲ್ಲಿ ಅಪಾರ ದೀಕ್ಷೆ. ಪ್ರತಿವರ್ಷ ಶ್ರೀರಾಯರ ಆರಾಧನೆಯನ್ನು ವಿಶೇಷವಾಗಿ ನೆರವೇರಿಸುತ್ತಾರೆ. ಅದರ ಫಲ ಇಂತಹ ಮಹತ್ವದ ಕೃತಿ ಅವರ ಕೈ ಸೇರಿದೆ.

ಮಾನವಕಷ್ಟದಿಂದ ವಿಜಯ ಶ್ರೀರಾಘವೇಂದ್ರವಿಜಯ. ಈ ವಿಜಯದ ಮಹೋತ್ಸವದ ಆಚರಣೆಯಲ್ಲಿ ನಾವೆಲ್ಲ ಪಾಲ್ಗೊಳ್ಳೋಣ. ಶ್ರೀರಾಯರ ಕೃಪೆ ಎಲ್ಲರಿಗೂ ಆಗಲಿ.

**ರಾಜಾ ರಾಜಗೋಪಾಲಾಚಾರ್ಯ**

ಆಪ್ತ ಕಾರ್ಯದರ್ಶಿಗಳು

ಶ್ರೀರಾಘವೇಂದ್ರಸ್ವಾಮಿಗಳವರ ಮಠ,

ಮಂತ್ರಾಲಯ.

॥ ಶ್ರೀಗುರುರಾಜೋ ವಿಜಯತೇ ॥

# ಅನುವಾದಕರ ಮುನ್ನುಡಿ

ನಮ್ಮ ಜನ್ಮಭೂಮಿಯಾದ ಭರತಖಂಡವು ದೇವತೆಗಳೂ ಕೂಡ ಜನ್ಮವೆತ್ತಿ ಬರಬೇಕೆಂದು ಆಶಿಸಬಹುದಾದ ಶ್ರೇಷ್ಠವಾದ ಭೂಭಾಗವು. ಇಲ್ಲಿ ಪವಮಾನಾಂಶಸಂಭೂತರಾದ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು, ಅವರ ಅನುಗಾಮಿಗಳಾದ ಶ್ರೀಜಯತೀರ್ಥರು, ಶ್ರೀವ್ಯಾಸರಾಜರು, ಶ್ರೀವಿಜಯೀಂದ್ರತೀರ್ಥರು, ಶ್ರೀವಾದಿರಾಜ-ತೀರ್ಥರು, ಶ್ರೀರಾಘವೇಂದ್ರತೀರ್ಥರು, ಶ್ರೀಸುಮತೀಂದ್ರತೀರ್ಥರು ಮುಂತಾದವರು ಅವತರಿಸಿ ತಮ್ಮ ತಪಸ್ಸು, ಪ್ರವಚನ ಮುಂತಾದವುಗಳಿಂದ ಸಜ್ಜನರನ್ನು ಅನುಗ್ರಹಿಸಿದ್ದಾರೆ. ಈ ಜ್ಞಾನಿವರೇಣ್ಯರ ಪರಂಪರೆಯಲ್ಲಿಯೇ ಬಂದಿರುವ ಶ್ರೀಪ್ರಹ್ಲಾದಾವತಾರರೆಂದು ಪ್ರಸಿದ್ಧರಾಗಿರುವ ಪ್ರಾತಃಸ್ಮರಣೀಯರಾದ ಭಕ್ತಜನರ ಕಾಮಧೇನು ಕಲ್ಪವೃಕ್ಷದಂತಿರುವ ಶ್ರೀರಾಘವೇಂದ್ರತೀರ್ಥಯತಿಸಾರ್ವಭೌಮರನ್ನು ವರ್ಣಿಸಲು ಈ 'ಶ್ರೀರಾಘವೇಂದ್ರವಿಜಯ' ಎಂಬ ಮಹಾಕಾವ್ಯವು ಪ್ರವೃತ್ತವಾಗಿದೆ. 'ಅಗಮ್ಯಮಹಿಮೆ'ರೆಂದು ಪ್ರಖ್ಯಾತರಾದ ಶ್ರೀಗುರುಸಾರ್ವಭೌಮರನ್ನು ಸಮಗ್ರವಾಗಿ ವರ್ಣಿಸಲು ಸಾಧ್ಯವಿಲ್ಲವೆಂದೇ ಈ ಕಾವ್ಯವು ಶ್ರೀಗುರುಗಳು ಮಾಡುವ ದೇವತಾಪೂಜೆಯ ಅನಂತರದ–ಭಗವಂತನ ಅವತಾರರೂಪಗಳ ಪ್ರಾರ್ಥನೆಯಲ್ಲಿಯೇ ನಿಂತಿದೆ ಎಂದು ತೋರುತ್ತದೆ.

ಈ ಕಾವ್ಯದ ವಿಷಯದಲ್ಲಿ ಒಂದು ಆಖ್ಯಾಯಿಕೆಯು ಹೀಗೆ ಕೇಳಿ ಬರುತ್ತದೆ. ಈ ಕವಿಗಳು ತಾವು ತಿಳಿದಿರುವ ಗುರುಮಹಿಮೆಯನ್ನು ಗರ್ಭೀಕರಿಸಿ ಹದಿನಾರು ಸರ್ಗಗಳಿಂದ ಈ ಮಹಾಕಾವ್ಯವನ್ನು ರಚಿಸಿದರು. ಗುರುಗಳು ಇದನ್ನು ಆದ್ಯಂತವಾಗಿ ಓದಿ ತಮ್ಮ ಅನುಗ್ರಹದಿಂದ ಲಬ್ಧವಾದ ಕವಿತಾಸುಂದರಿಯ ವಿಲಾಸವನ್ನು ನೋಡಿ ಸಂತೋಷಪಟ್ಟರು. ಆದರೆ 'ಆತ್ಮಸ್ತುತಿ'ಯನ್ನು ಒಲ್ಲದ ಗುರುಗಳು ಈ ಕಾವ್ಯವು ಲೋಕದಲ್ಲಿ ಪ್ರಚಾರವಾಗುವುದನ್ನು ಒಪ್ಪಲಿಲ್ಲ. ಆದರೆ ಅನೇಕ ಪಂಡಿತರಿಂದಲೂ, ಸ್ವತಃ ಗ್ರಂಥಕರ್ತರಾದ ಈ ಕವಿಗಳಿಂದಲೂ ಪ್ರಾರ್ಥಿತರಾಗಿ ಈ ಗ್ರಂಥವು ಲೋಕದಲ್ಲಿ ಪ್ರಚಾರವಾಗುವುದನ್ನು ಒಪ್ಪಿದರು. ಆದರೂ ಜಗದ್ಗುರುಗಳಾದ ಶ್ರೀಮಧ್ವಾಚಾರ್ಯರ ಮಹಿಮೆಯನ್ನು ವರ್ಣಿಸುವ ಶ್ರೀಸುಮಧ್ವವಿಜಯ ಮಹಾಕಾವ್ಯದಲ್ಲಿಯೂ ಹದಿನಾರು ಸರ್ಗಗಳಿರುವುದರಿಂದ ಆ ಕಾವ್ಯದ ಸಾಮ್ಯವು ಈ ಕಾವ್ಯಕ್ಕೆ ಬರಬಾರದೆಂದು, ಅದಕ್ಕಿಂತ ನ್ಯೂನವಾಗಿಯೇ ಇರಬೇಕೆಂದೂ ರಾಘವೇಂದ್ರ-ವಿಜಯ ಮಹಾಕಾವ್ಯದ ಕೊನೆಯ ಆರು ಸರ್ಗಗಳನ್ನು ತುಂಗಭದ್ರಾ ನದಿಯಲ್ಲಿ ಬಿಟ್ಟು ಉಳಿದ ಹತ್ತು ಸರ್ಗಗಳನ್ನು ಮಾತ್ರ ಕೊಟ್ಟರು. ಹೀಗೆ ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು ಗುರುಗಳಾದ ಶ್ರೀಮಧ್ವಾಚಾರ್ಯರಲ್ಲಿದ್ದ ಭಕ್ತಿಯಿಂದ ಹತ್ತು ಸರ್ಗಮಾತ್ರ ಉಳಿಸಿದರು. ಆದ್ದರಿಂದಲೇ ಈಗ ಸಿಕ್ಕಿರುವ ಹತ್ತು ಸರ್ಗ ಪರ್ಯಂತವಾದ ಕಾವ್ಯವು ಗುರುಗಳ ಮಹಿಮೆಯನ್ನು ಪೂರ್ತಿಯಾಗಿ ತಿಳಿಸುವುದಿಲ್ಲ. ಅಷ್ಟೇ ಅಲ್ಲ, ಅಪೂರ್ಣವಾದಂತೆಯೂ ಕಾಣುತ್ತದೆ.

ಈ ಮಹಾಕಾವ್ಯದ ಕವಿಗಳು ಶ್ರೀಗುರುರಾಜರ ಪೂರ್ವಾಶ್ರಮದ ಜ್ಯೇಷ್ಠ ಸಹೋದರಿಯಾದ ಶ್ರೀವೆಂಕಟಾಂಬಾದೇವಿಯ ಗರ್ಭಸಂಭೂತರು. ಇವರ ತಂದೆಗಳು 'ಷಡ್‌ದರ್ಶನೀವಲ್ಲಭ' ಎಂಬ ಬಿರುದನ್ನು ಹೊಂದಿರುವ ಲಕ್ಷ್ಮೀನರಸಿಂಹಾಚಾರ್ಯರು. ಶ್ರೀರಾಘವೇಂದ್ರಗುರುಸಾರ್ವಭೌಮರ ಅನುಗ್ರಹದಿಂದಲೇ ಸಕಲ ಶಾಸ್ತ್ರಪಾರಂಗತರಾದ ಮಹಾಕವಿಗಳಾದ ಈ ನಾರಾಯಣಾಚಾರ್ಯರು ತಮಗೆ ಸಹಜ ಸಿದ್ಧವಾದ ಕವಿತಾ-ಪ್ರತಿಭೆಯಿಂದ, ಲೋಕವ್ಯವಹಾರ ಪರಿಜ್ಞಾನ ಮತ್ತು ಶಾಸ್ತ್ರಾಭ್ಯಾಸದಿಂದ ಉಂಟಾದ ನಿಪುಣತೆಯಿಂದ, ಕಾವ್ಯಜ್ಞರ ಸಹವಾಸದಿಂದ ಉಂಟಾದ ಅಭ್ಯಾಸದಿಂದ, ವಿಶೇಷತಃ ಶ್ರೀಗುರುಗಳ ಕೃಪೆಯಿಂದ ಈ ಮಹಾಕಾವ್ಯವನ್ನು

ಬರೆದಿದ್ದಾರೆ. ಶ್ರೀಮಧ್ವಾಚಾರ್ಯರ ಚರಿತ್ರೆಯನ್ನು ತಾವು ನೋಡಿ, ಕೇಳಿ ಸರಿಯಾಗಿ ತಿಳಿದುದನ್ನೇ ಶ್ರೀಸುಮಧ್ವ-ವಿಜಯದಲ್ಲಿ ಹೇಗೆ ಶ್ರೀನಾರಾಯಣಪಂಡಿತಾಚಾರ್ಯರು ಬರೆದಿರುತ್ತಾರೋ ಅದರಂತೆ ಕವಿಗಳಾದ ನಾರಾ-ಯಣಾಚಾರ್ಯರು ಶ್ರೀರಾಘವೇಂದ್ರಸ್ವಾಮಿಗಳ ಪೂರ್ವಾಶ್ರಮದ ಮತ್ತು ಯತ್ಯಾಶ್ರಮದ ಚರಿತ್ರೆಗಳನ್ನು ತಾವು ನೋಡಿದ್ದನ್ನು ಮತ್ತು ಸರಿಯಾಗಿ ತಿಳಿದುದನ್ನೇ ಮಹಾಕಾವ್ಯರೂಪದಲ್ಲಿ ಬರೆದಿರುತ್ತಾರೆ. ಆದುದರಿಂದ ಈ ಕಾವ್ಯದಲ್ಲಿ ವರ್ಣಿತವಾದ ವಿಷಯಗಳು ಪರಮಪ್ರಾಮಾಣಿಕವೆಂದು ತಿಳಿಯತಕ್ಕದ್ದು.

ಈ ಕವಿಗಳು ಶ್ರೀರಾಘವೇಂದ್ರಗುರುಗಳ ಪೂರ್ವಾಶ್ರಮದ ಸೋದರ ಅಳಿಯಂದಿರು ಎಂದಮೇಲೆ, ಶ್ರೀರಾಘವೇಂದ್ರಸ್ವಾಮಿಗಳ ಕಾಲದಲ್ಲಿಯೇ ಇವರು ಇದ್ದರೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಶ್ರೀರಾಘವೇಂದ್ರತೀರ್ಥರು ಕ್ರಿ.ಶ. 1596ರಲ್ಲಿ ಅವತರಿಸಿ 76ವರ್ಷ ಮನುಷ್ಯ ದೃಷ್ಟಿಗೋಚರರಾಗಿದ್ದು, ಕ್ರಿ.ಶ. 1671ರಲ್ಲಿ ತುಂಗಭದ್ರೆಯ ಪಾವನತರಂಗಗಳಿಂದ ಶೀತಲವಾಗಿರುವ ದಕ್ಷಿಣಭಾರತದ ಮಂಗಲಕರ ಪ್ರದೇಶ-ವಾಗಿರುವ ಮಂತ್ರಾಲಯದಲ್ಲಿ ಭೌತಿಕ ಶರೀರವನ್ನು ಬಿಡದೆ (ಸಶರೀರಾಗಿಯೇ) ವೃಂದಾವನವನ್ನು ಪ್ರವೇಶಿಸಿದ್ದಾರೆ, ಎಂಬ ವಿಷಯವು ಎಲ್ಲರಿಗೂ ತಿಳಿದುದೇ ಆಗಿದೆ. ಈ ಕವಿಗಳ ತಂದೆಯವರಾದ ಶ್ರೀಲಕ್ಷ್ಮೀನರಸಿಂಹಾಚಾರ್ಯರು ಶ್ರೀರಾಘವೇಂದ್ರತೀರ್ಥರಿಗೆ ಪೂರ್ವಾಶ್ರಮದ ಬಾಲ್ಯದಲ್ಲಿ ವಿದ್ಯಾಗುರುಗಳಾಗಿದ್ದರು. ಆದುದರಿಂದಲೂ ಈ ಕವಿಗಳು (17) ಹದಿನೇಳನೇ ಶತಮಾನದವರೆಂದು ದೃಢವಾಗಿ ಹೇಳಬಹುದು.

ಈ ಕವಿಗಳು ಕಾವ್ಯನಿರ್ಮಾಣ ವಿಷಯದಲ್ಲಿ 'ರೋಮ್ಣಾಂ ಹರ್ಷಣಕಾರಿಣೀ ಶ್ರವಣತಃ ಪಾಪೌಘವಿಧ್ವಂಸಿನೀ ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯನೀ । ಸಂಜಾತೇ ಭುವಿ ರುಕ್ಮಿಣೀಶವಿಜಯೇ ಸದ್ವಾದಿರಾಜೋದಿತೇ ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋಽಯಮಾದ್ಯೋ ಮುದಾಮ್' ಎಂದು "ಶ್ರವಣ ಮಾತ್ರದಿಂದ ಪಾಪರಾಶಿಯನ್ನು ನಾಶಮಾಡುವ ಮತ್ತು ಆದರಾತಿಶಯದಿಂದ ಅರ್ಥವಿಚಾರ ಮಾಡು-ವವರಿಗೆ ವಿಚಿತ್ರವಾದ ನಿರ್ಮಲವಾದ, ಶ್ಲಾಘನೀಯವಾದ ಅರ್ಥವನ್ನು ತೋರಿಸುವ ಶ್ರೀವಾದಿರಾಜರಿಂದ ರಚಿತವಾದ ರುಕ್ಮಿಣೀಶವಿಜಯವು ಭೂಮಿಯಲ್ಲಿ ಆವಿರ್ಭೂತವಾದಾಗ, ಸುರಸಮೂಹಕ್ಕೂ ಆನಂದವನ್ನುಂಟು-ಮಾಡುವ, ಮಹನೀಯವಾದ ಮೊದಲನೆಯ ಸರ್ಗವು ಮುಗಿಯಿತು" ಎಂಬ ಶ್ರೀವಾದಿರಾಜರ ರುಕ್ಮಿಣೀಶ-ವಿಜಯದ ಪ್ರತಿಸರ್ಗದ ಕೊನೆಯಲ್ಲಿರುವ ಶ್ಲೋಕದ ಛಾಯೆಯಂತೆಯೇ ಪ್ರತಿಸರ್ಗದ ಕೊನೆಯಲ್ಲಿ ಒಂದು ಶ್ಲೋಕವನ್ನು ರಚಿಸಿರುತ್ತಾರೆ.

ಶ್ರೀಮತ್ಕಶ್ಯಪವಂಶವಾರ್ಧಿಶಶಿನಃ ಷಡ್ದರ್ಶನೀವಲ್ಲಭ-<br>
ಶ್ರೀಲಕ್ಷ್ಮೀನರಸಿಂಹವಿತ್ತವಿದುಷಃ ಶ್ರೀವೇಂಕಟಾಂಬಾಮಣೌ(ಣೇಃ) ।<br>
ಜಾತೇನಾರ್ಯದಯಾಸುಧಾಮಯಗಿರಾ ನಾರಾಯಣೇನೋದಿತೇ<br>
ಕಾವ್ಯೇ ಚಾರುಣಿ ರಾಘವೇಂದ್ರವಿಜಯೇ ಸರ್ಗೋ ವಿಭಾತ್ಯಾದಿಮಃ ॥

ಇವರು ಕಶ್ಯಪಗೋತ್ರದಲ್ಲಿ ಹುಟ್ಟಿದವರೆಂದೂ, ಇವರ ತಂದೆ ಷಡ್ದರ್ಶನೀವಲ್ಲಭರೆಂಬ ಬಿರುದಭೂಷಿತ-ರಾದ ಶ್ರೀಲಕ್ಷ್ಮೀನರಸಿಂಹಾಚಾರ್ಯರೆಂದೂ, ಇವರ ತಾಯಿ ಶ್ರೀವೆಂಕಟಾಂಬಾ ಎಂದೂ, ಪ್ರತಿಸರ್ಗದ ಕೊನೆಯಲ್ಲಿ 'ರಾಘವೇಂದ್ರವಿಜಯೇ' ಎಂದೂ, 'ಆರ್ಯದಯಾಸುಧಾಮಯಗಿರಾ' ಎಂದು ಉಕ್ತವಾಗಿರುವುದರಿಂದ ಈ ಕಾವ್ಯಕ್ಕೆ ಆರ್ಯದಯಾಂಕತ್ವವೂ, ಸುಧಾಮಯಗಿರಾಂಕತ್ವವೂ, ರಾಘವೇಂದ್ರವಿಜಯಾಂಕತ್ವವೂ ಉಂಟೆಂಬುದು ತಿಳಿದುಬರುತ್ತದೆ.

ಆನುವರಿಂದ 'ರಾಘವೇಂದ್ರವಿಜಯ' ಎಂಬ ಹೆಸರಿನ ಈ ಕಾವ್ಯದ ಪಠನದಿಂದ, ಮನನದಿಂದ, ಪಾಠ ಹೇಳುವುದರಿಂದ ಮತ್ತು ಪ್ರಚಾರದಿಂದ ಎಲ್ಲರಿಗೂ ಶ್ರೀರಾಘವೇಂದ್ರತೀರ್ಥರ ದಯೆಯಿಂದ ಎಲ್ಲಾಕಡೆ ವಿಜಯ ಉಂಟಾಗುತ್ತದೆ. ಅವರ ಮಾತು 'ಶ್ರೀಗುರುರಾಜರ ಅನುಗ್ರಹದಿಂದ ಸುಧಾಮಯ ಅಂದರೆ ಅಮೃತಸಮಾನ-ವಾಗುತ್ತದೆ ' ಎಂದೂ ತಿಳಿದುಬರುತ್ತದೆ.

ಈ ಮಹಾಕವಿಗಳು ಅಲ್ಲಲ್ಲಿ ಪೂರ್ವಮೀಮಾಂಸಾನ್ಯಾಯಗಳನ್ನೂ , ನ್ಯಾಯಶಾಸ್ತ್ರ ಮೊದಲಾದ ಇತರ ಶಾಸ್ತ್ರಗಳಲ್ಲಿ ಬರುವ ವಿಷಯಗಳನ್ನೂ ಸಂದರ್ಭೋಚಿತವಾಗಿ ದೃಷ್ಟಾಂತವಾಗಿ ಕೊಡುತ್ತಾರೆ. ಇದರಿಂದ ಇವರಿಗೆ ತಮ್ಮ ತಂದೆಯಿಂದಲೂ ಶ್ರೀಗುರುರಾಜರಿಂದಲೂ ಷಡ್ದರ್ಶನ ಪಾಂಡಿತ್ಯವು ಲಭ್ಯವಾಗಿತ್ತು ಎಂದು ತಿಳಿದುಬರುತ್ತದೆ. ಶಾಸ್ತ್ರಪಾಂಡಿತ್ಯ ಮತ್ತು ಕವಿತ್ವಗಳ ಸರಸ ಮೇಲನವನ್ನಿಲ್ಲಿ ಕಾಣಬಹುದು.

ಇಂತಹ ಕಾವ್ಯರತ್ನಕ್ಕೆ ಎರಡು ವ್ಯಾಖ್ಯಾನಗಳಿವೆ. ಮೊದಲನೆಯದು 'ಬಾಲಬೋಧಿನೀ', ಎರಡನೆಯದು 'ಗುರುಪಾದಸೇವಾ' ಎಂಬ ಹೆಸರಿನದು.

ಮೊದಲನೆಯ ವ್ಯಾಖ್ಯಾನವನ್ನು ಬರೆದವರು ಶ್ರೀರಾಮಾಚಾರ್ಯರು. ಇವರು ಶ್ರೀಗುರುರಾಜರ ಉಭಯ-ವಂಶಾಬ್ಧಿಚಂದ್ರಮರಾದ ಶ್ರೀಧೀರೇಂದ್ರತೀರ್ಥರ ಪೂರ್ವಾಶ್ರಮದ ಪೌತ್ರರು ಮತ್ತು ದೇಶಿಕ ಗೋಪಾಲಕೃಷ್ಣಾ-ಚಾರ್ಯರೆಂಬುವರ ಶಿಷ್ಯರು. ಶ್ರೀರಾಘವೇಂದ್ರಸ್ವಾಮಿಗಳವರ ಪೀಠಾಧಿಪತಿಗಳಾಗಿದ್ದ ಶ್ರೀಸುಜ್ಞಾನೇಂದ್ರತೀರ್ಥರ ಪೂರ್ವಾಶ್ರಮದ ತಂದೆಗಳು. ಶ್ರೀರಾಘವೇಂದ್ರಗುರುಸಾರ್ವಭೌಮರ ಮಹಾಸಂಸ್ಥಾನದ ಪೀಠಾಧಿಪತಿಗಳಾಗಿದ್ದ ಶ್ರೀಸುಶಮೀಂದ್ರತೀರ್ಥರ ಪೂರ್ವಾಶ್ರಮದ ಹಿರಿಯರೂ ಆಗಿದ್ದಾರೆ. ಹೀಗೆ ಸದ್ಗುರುಗಳ ಉಪದೇಶದಿಂದ ಪ್ರಣೀತವಾದ ಶ್ರೀರಾಮಾಚಾರ್ಯರ 'ಬಾಲಬೋಧಿನಿ' ವ್ಯಾಖ್ಯಾನವು ಮೂಲಾರ್ಥವನ್ನು ತಿಳಿಸುವ ವಿಷಯದಲ್ಲಿ ಅತ್ಯಂತ ಉಪಯುಕ್ತವಾದುದು. ಸರ್ವಶಾಸ್ತ್ರ ಪಾರಂಗತರಾದ ಈ ರಾಮಾಚಾರ್ಯರು ಮೀಮಾಂಸಾದಿ ಶಾಸ್ತ್ರಗಳ ವಿಷಯವು ಬಂದಾಗ ಅದನ್ನು ಚೆನ್ನಾಗಿ ವಿವರಿಸುತ್ತಾರೆ. ಉಪನ್ಯಾಸ ರೂಪದಿಂದ ಕಾವ್ಯಶ್ಲೋಕಗಳಿಗೆ ವ್ಯಾಖ್ಯಾನ ಮಾಡುವ ಇವರ ಶೈಲಿಯು ವಿನೂತನವಾದುದು. ಆದರೆ ಈ ವ್ಯಾಖ್ಯಾನವು ಸಮಗ್ರವಾಗಿ ಉಪಲಬ್ಧವಾಗಿಲ್ಲ. ಆರನೇ ಸರ್ಗದ ಹತ್ತೊಂಭತ್ತನೇ ಶ್ಲೋಕದವರೆಗೆ ಮಾತ್ರ ಉಪಲಬ್ಧವಿದೆ. ಎರಡನೇ ವ್ಯಾಖ್ಯಾನವು ನ್ಯಾಯಸ್ಥಾನ ಪಂಡಿತರಾಗಿದ್ದ ರಾಘವೇಂದ್ರಾಚಾರ್ಯರೆಂಬುವವರಿಂದ ವಿರಚಿತವಾದುದು. ಇದರಲ್ಲಿಯೂ ಪ್ರತಿಪದಾರ್ಥದ ವಿವರಣೆಯ ಮೂಲಕ ಮೂಲಾರ್ಥವು ಚೆನ್ನಾಗಿ ವಿವರಿಸಲ್ಪಟ್ಟಿದೆ. ಈ ವ್ಯಾಖ್ಯಾನವು ಸಮಗ್ರವಾಗಿ ಉಪಲಬ್ಧವಿದೆ.

ಆದರೆ ಸಂಸ್ಕೃತಭಾಷೆಯಲ್ಲಿರುವ ಈ ಮೂಲ ಮಹಾಕಾವ್ಯ ಮತ್ತು ಅದರ ವ್ಯಾಖ್ಯಾನಗಳನ್ನು ಸಾಧಾರಣ ಜನರು ತಿಳಿಯಲು ಅಸಾಧ್ಯವೆಂದು ಭಾವಿಸಿ ಶಿಷ್ಯಜನ ಕೃಪಾಳುಗಳಾದ ಶ್ರೀಮತ್ಸುಜಯೀಂದ್ರತೀರ್ಥ ಶ್ರೀಪಾ-ದಂಗಳವರು ಶ್ರೀರಾಘವೇಂದ್ರವಿಜಯ ಮಹಾಕಾವ್ಯದ ಮೂಲಶ್ಲೋಕ, ಪದಚ್ಛೇದ, ಅನ್ವಯ, ಅನ್ವಯಾರ್ಥ, ತಾತ್ಪರ್ಯ, ವಿಗ್ರಹ, ವಿಶೇಷಾಂಶಗಳನ್ನು ಕನ್ನಡ ಲಿಪಿಯಲ್ಲಿ ಕನ್ನಡಭಾಷೆಯಲ್ಲಿ ಅನುವಾದ ಮಾಡಿಸಿ ಪ್ರಚುರ-ಪಡಿಸಬೇಕೆಂದು ಆಜ್ಞೆ ಮಾಡಿ ಗುರುಭಕ್ತರೆಲ್ಲರಿಗೂ ಮಹೋಪಕಾರ ಮಾಡಿದ್ದಾರೆ. ಶ್ರೀಹರಿವಾಯುಗುರುಭಕ್ತರು, ಶ್ರೀಹರಿಯ ಮತ್ತು ಶ್ರೀವಾಯುದೇವರ ಮತ್ತು ಶ್ರೀಗುರುರಾಜರ ಅನುಗ್ರಹವನ್ನುಂಟು ಮಾಡುವ ಈ ಮಹಾ-ಕಾವ್ಯದ ಅನುವಾದವನ್ನು ಓದಿ ಶ್ರೀಹರಿವಾಯುಗಳ ಮತ್ತು ಶ್ರೀಗುರುರಾಜರ ಪರಮಾನುಗ್ರಹಕ್ಕೆ ಪಾತ್ರರಾಗಬೇಕಾಗಿ ಕೋರಿಕೆ.

**- ಸಾಣೂರು ಭೀಮಭಟ್ಟರು**



# ಶ್ರೀರಾಘವೇಂದ್ರವಿಜಯ

## ಸಂಪುಟ - 1

## ವಿಷಯಾನುಕ್ರಮಣಿಕಾ

ಅ.ಸಂ. ವಿಷಯ ಶ್ಲೋಕಸಂಖ್ಯೆ

**1ನೆಯ ಸರ್ಗ**

# ಪ್ರಥಮಸರ್ಗದ ಕಥಾಸಾರ

ಮೊದಲು ಶ್ರೀಲಕ್ಷ್ಮೀನರಸಿಂಹದೇವರ ನಖ(ಉಗುರು)ವನ್ನು ಪ್ರಾರ್ಥಿಸುತ್ತಾರೆ. ಶ್ರೀನರಸಿಂಹದೇವರ ಉಗುರಿಗೂ ದೇವರಿಗೂ ಭೇದವಿಲ್ಲ. ದೇವರು ಭಕ್ತರ ಅಭೀಷ್ಟಪ್ರದಾನ ಮಾಡಲು ದಶಾವತಾರಗಳನ್ನು ಸ್ವೀಕರಿಸಿದಂತೆ ಪರಮಾತ್ಮನ ಉಗುರೂ ಸಹಿತ ಹತ್ತು ರೂಪಗಳನ್ನು ಸ್ವೀಕರಿಸಿ ಹಿರಣ್ಯಕಶಿಪುವಿನ ಸಂಹಾರ, ಪ್ರಹ್ಲಾದನ ರಕ್ಷಣೆ ಮುಂತಾದ ಕಾರ್ಯಗಳನ್ನು ಮಾಡಿದೆ.

ಅನಂತರ ನವನೀತ ಕೃಷ್ಣನ ಸ್ತುತಿಯು ಬಂದಿದೆ. ''ದೇವತೆಗಳ ಸಮೂಹದಿಂದ ಸ್ತುತಿಸಲ್ಪಟ್ಟ ಬೆಣ್ಣೆಯನ್ನು ಕೈಯಲ್ಲಿ ಹಿಡಿದಿರುವ ಬಾಲಕೃಷ್ಣನು ನಮ್ಮ ಅಭೀಷ್ಟವನ್ನು ಕೊಡಲಿ'' ಎಂದು ಪ್ರಾರ್ಥಿಸಿ, ಅನಂತರ ''ಆದಿಗುರು-ಗಳಾದ ಶ್ರೀಮಧ್ವಾಚಾರ್ಯರೆಂಬ ಚಂದ್ರನು ನಮ್ಮ ಮನಸ್ಸಿನಲ್ಲಿ ಒಳ್ಳೆಯ ಶಬ್ದಾರ್ಥಗಳೆಂಬ ಸಮುದ್ರವನ್ನು ಉಕ್ಕಿಸಲಿ'' ಎಂದು ಪ್ರಾರ್ಥಿಸಿದ್ದಾರೆ.

ಅನಂತರ ಶಾರದೆಯನ್ನು ಸ್ತುತಿಸುತ್ತಾ ''ಶ್ರೀರಾಘವೇಂದ್ರಗುರುಗಳ ನಾಲಿಗೆಯೆಂಬ ರಂಗಸ್ಥಳದಲ್ಲಿ ನರ್ತನ ಮಾಡುವ, ಶಬ್ದ ಸಮುದ್ರವನ್ನು ಶರತ್ಕಾಲದ ಬೆಳದಿಂಗಳಿನಂತೆ ಬೆಳೆಸುವ ಶಾರದೆಯು ನಮಗೆ ರಕ್ಷಕಳಾಗಲಿ'' ಎಂದು ಪ್ರಾರ್ಥಿಸಿದ್ದಾರೆ. ಕವಿಗಳು ಮುಂದೆ ಹೀಗೆ ಹೇಳುತ್ತಾರೆ .

ವಜ್ರಮಣಿಯು ಕಠಿಣವಾಗಿದ್ದರೂ ಕಾಂಚನ (ಭಂಗಾರ)ದ ಯೋಗದಿಂದ ಸರ್ವಮಾನ್ಯವಾಗುವಂತೆ ತ್ರಿವಿಕ್ರಮಪಂಡಿತಾಚಾರ್ಯರ ಮಾತು ಗಹನವಾಗಿದ್ದರೂ ಅನುಪ್ರಾಸಾದಿ ಸುವರ್ಣ (ಒಳ್ಳೆಯ ವರ್ಣಗಳ) ಯೋಗದಿಂದ ಸಕಲ ಕವಿಗಳಿಗೂ ಮಾನ್ಯವಾಗಿದೆ. ನಾರಾಯಣಪಂಡಿತಾಚಾರ್ಯರ ವಾಣಿಯು ವೀಣೆಯ ರಣಿತದಂತೆ ಮನೋಹರವಾಗಿದೆ. ವೃಂದಾರಕ ವನದಲ್ಲಿ ವಿಕಸಿತವಾಗಿರುವ ಮಂದಾರಪುಷ್ಪದ ಮಕರಂದ ರಸದಂತಿರುವ ಶ್ರೀವ್ಯಾಸತೀರ್ಥರ ಮಾತು ನಮಗೆ ವಿಜಯವನ್ನು ಕೊಡಲಿ. ಶ್ರೀವೇದವ್ಯಾಸರ ಬ್ರಹ್ಮಸೂತ್ರಾರ್ಥದ ಉಪನ್ಯಾಸವನ್ನು ಶ್ರೀವ್ಯಾಸತೀರ್ಥರ ಬಾಯಿಯಿಂದ ಕೇಳಿದ ಮೇಲೆ ಎಂತಹ ಅಭಿಮಾನಿಯಾದ ವಿದ್ವಾಂಸನೂ ಕೂಡ ಶ್ರೀವ್ಯಾಸರಾಜರ ದಾಸನಾಗುತ್ತಾನೆ. 64ವಿದ್ಯೆಗಳನ್ನು ಬಲ್ಲ ಶ್ರೀವಿಜಯೀಂದ್ರರೆಂಬ ಜ್ಯೋತಿಸ್ಸಿಗೆ ನಮಸ್ಕಾರ. ಸಜ್ಜನರಲ್ಲಿ ವಿನಿಯೋಗಿಸಲ್ಪಟ್ಟ ಸಂಪತ್ತುಳ್ಳ, ಗದ್ಯಪದ್ಯಾತ್ಮಕವಾದ ಗ್ರಂಥರಚನೆಯಲ್ಲಿ ಪ್ರಥಮಸ್ಥಾನರಾದ ಶ್ರೀ ಸುಧೀಂದ್ರತೀರ್ಥರನ್ನು ಸೇವಿಸುತ್ತೇನೆ. ಬಯಸಿದ ಇಷ್ಟಾರ್ಥಗಳನ್ನು ಪ್ರದಾನಮಾಡುವ ಕಲ್ಪವೃಕ್ಷದಂತಿರುವ ಶ್ರೀರಾಘವೇಂದ್ರತೀರ್ಥರ ಪಾದಪದ್ಮಗಳಿಗೆ ನಮಸ್ಕಾರ ಮಾಡುತ್ತೇನೆ. ರಾಮಚರಿತ್ರ ಕುಸುಮಗಳನ್ನು ಕೇವಲ ಹನ್ನೊಂದು ಸ್ರಗ್ಧರಗಳಿಂದ ಗ್ರಥಿಸಿದ ಇಪ್ಪತ್ತುನಾಲ್ಕು ಸಹಸ್ರಶ್ಲೋಕಗಳಿಂದ ಶ್ರೀರಾಮಾಯಣವನ್ನು ರಚಿಸಿದ ವಾಲ್ಮೀಕಿ-ಯನ್ನು ನೆನಪು ಮಾಡಿಕೊಡುವ ಶ್ರೀರಾಘವೇಂದ್ರತೀರ್ಥರನ್ನು ಪುನಃ ನಮಸ್ಕರಿಸುತ್ತೇನೆ. ''ಯಾರ ಅನುಗ್ರಹದಿಂದ ಮೂಕನೂ ಶೇಷನಂತಾಗುತ್ತಾನೆಯೋ, ಕಡುಬಡವನೂ ಕುಬೇರನಂತೆ ಆಗುತ್ತಾನೋ ಅಂತಹ ಶ್ರೀರಾಘವೇಂದ್ರ-ತೀರ್ಥರನ್ನು ಶರಣು ಹೊಂದುತ್ತೇನೆ.''

ಶ್ರೀನರಸಿಂಹದೇವರನ್ನು ಆರಾಧಿಸಿ ಅದ್ಭುತವಾದ ಪಾಂಡಿತ್ಯವನ್ನು ಗಳಿಸಿದ ನಮ್ಮ ತಂದೆಗಳಾದ ಶ್ರೀಲಕ್ಷ್ಮೀ-ನರಸಿಂಹಾಚಾರ್ಯರನ್ನು ಮೊರೆ ಹೊಂದುತ್ತೇನೆ. ಇತರ ನರರ ಸ್ತುತಿಯಿಂದ ನನ್ನ ನಾಲಿಗೆಗೆ ಪಾಪ ಉಂಟಾಗಿದೆ. ಈಗ ಅದರ ಪರಿಹಾರಕ್ಕಾಗಿ ಗುರ್ವಂತರ್ಯಾಮಿಯಾದ ಭಗವಂತನ ಸ್ತುತಿಯೆಂಬ ಗಂಗೆಯಲ್ಲಿ ಮುಳುಗುತ್ತಿದ್ದೇನೆ.

ಚಂದನ (ಗಂಧದ ಮರ) ಕಾನನದ ಸಹವಾಸದಿಂದ ಬೇವಿನ ಮರವೂ ಸ್ವಲ್ಪ ಸುವಾಸನೆಯನ್ನು ಹೊಂದುವಂತೆ ಕವಿಗಳ ಸಹವಾಸದಿಂದ ಸ್ವಲ್ಪವಾದ ಕವಿತಾ ನಿರ್ಮಾಣವನ್ನು (ಅಪೂರ್ವವಾದ ಪ್ರಬಂಧವನ್ನು) ನಾನು ಮಾಡುತ್ತಿದ್ದೇನೆ.

ಈ ಕಾವ್ಯ ನಿರ್ಮಾಣಕ್ಕೆ ಪ್ರತ್ಯಕ್ಷ ಫಲವು ಗುರುಗಳ ಅನುಗ್ರಹ. ಅದೃಷ್ಟ ಫಲವು ಮೋಕ್ಷಪ್ರಾಪಕವಾದ ಹರಿ ಗುರುಗಳ ಅನುಗ್ರಹ. ಸ್ವಿಷ್ಟ ಕೃದ್ ಯಾಗಕ್ಕೆ ಮತ್ತು ಬ್ರಹ್ಮಸೂತ್ರದ ಮೊದಲನೆಯ ಸೂತ್ರದ ಓಂಕಾರಕ್ಕೆ ಎರಡು ಫಲಗಳಿದ್ದಂತೆ ಇದಕ್ಕೂ ಎರಡು ಫಲಗಳು. ಗೋವಿಂದನ ಕರುಣೆಯಿಲ್ಲದೆ ಮೋಕ್ಷವಿಲ್ಲ, ಗುರುಗಳ ಕರುಣೆಯಿಲ್ಲದೆ ಯಾವ ಶ್ರೇಯಸ್ಸೂ ಇಲ್ಲ. ಬ್ರಹ್ಮಜಿಜ್ಞಾಸೆಗೆ ಮೋಕ್ಷವು ಹೇಗೆ ಫಲವೋ ಅದರಂತೆ ಕವಿತೆಯ ಫಲವು ಗುರುಗಳ ಗುಣವರ್ಣನೆಯೇ ಸರಿ. ಚಿಲ್ಲಬೀಜದ ಪುಡಿಯಿಂದ ಕಲುಷಿತವಾದ ನೀರು ಸ್ವಚ್ಛವಾಗುವಂತೆ ಗುರುಪಾದದ ಧೂಳಿಯಿಂದ ನನ್ನ ಕವಿತೆಯೂ ಶುದ್ಧವಾಗುತ್ತದೆ. ನಾಲಿಗೆಯು ಕೆಟ್ಟಿದ್ದರೆ ಸಿಹಿಯಾದ ಸಕ್ಕರೆಯೂ ಕಹಿಯಾಗುವಂತೆ, ಕವಿತೆಯು ಸ್ವತಃ ಸುಂದರವಾಗಿದ್ದರೂ ದುರ್ಜನನನ್ನು ವರ್ಣಿಸಲು ಹೊರಟಿದ್ದರೆ ಗ್ರಾಹ್ಯವಲ್ಲ. ಸಮುದ್ರದ ಉಪ್ಪುನೀರು ಮೋಡದೊಡನೆ ಬೆರೆತರೆ ಸಿಹಿಯಾಗಿರುವಂತೆ ನನ್ನ ಕಾವ್ಯವು ಗುಣಾಲಂಕಾರಗಳಿಲ್ಲದಿರುವುದರಿಂದ ಚೆನ್ನಾಗಿಲ್ಲದಿದ್ದರೂ ಗುರುಗಳ ಗುಣವರ್ಣನದಿಂದ ಸೇವಿಸಲು ಯೋಗ್ಯವಾಗುತ್ತದೆ. ಪತಿವ್ರತೆಯಾದ ಹೆಂಡತಿಯಲ್ಲಿ ದಕ್ಷತೆ ಮುಂತಾದ ಗುಣವು ಕಡಿಮೆಯಾಗಿದ್ದರೂ ಹೇಗೆ ಅವಳು ತ್ಯಾಜ್ಯಳಲ್ಲವೋ ಅದರಂತೆ ಗುಣವಿಲ್ಲದಿದ್ದರೂ ದೋಷವಿಲ್ಲದಿರುವ ನನ್ನ ಕವಿತೆಯು ತ್ಯಾಜ್ಯವಲ್ಲ.

ದೋಷರಹಿತವಾದ ಗುಣಪೂರ್ಣವಾದ ಸರ್ವಾರ್ಥದಾಯಕವಾದ ವೇದಪ್ರತಿಪಾದ್ಯವಾದ ಪರಬ್ರಹ್ಮದಂತೆ ಇರುವ ಕಾವ್ಯವು ಅತ್ಯಂತ ದುರ್ಲಭ. ನನ್ನ ಕಾವ್ಯದಲ್ಲಿ ಅನೇಕ ನ್ಯೂನತೆಗಳಿರಬಹುದು. ಆದರೆ ಕಾಗೆಯು ಬೇವಿನ ಹಣ್ಣನ್ನೇ ಹುಡುಕುತ್ತದೆ. ಕೋಗಿಲೆಯು ಮಾವಿನ ಮರವನ್ನೇ ಹುಡುಕುತ್ತದೆ. ಅದರಂತೆಯೇ ದುರ್ಜನನು ಕಾವ್ಯದಲ್ಲಿ ದೋಷವನ್ನೇ ಹುಡುಕುತ್ತಾನೆ. ಸಜ್ಜನನು ಗುಣವನ್ನೇ ಅನ್ವೇಷಿಸುತ್ತಾನೆ.

ನಮ್ಮ ಗುರುಗಳ ಮಹಿಮೆಯನ್ನು ವರ್ಣಿಸಲು ಯಾರಿಗೂ ಸಾಧ್ಯವಿಲ್ಲ. ಆದರೂ ಅವರ ಅನುಗ್ರಹ ಬಲದಿಂದ, ಭಕ್ತಿಯಿಂದ ಸ್ವಲ್ಪಮಟ್ಟಿಗೆ ವರ್ಣಿಸುತ್ತೇನೆ. ದೇವತೆಗಳಲ್ಲಿ ದೇವೇಂದ್ರನಂತೆ, ಯೋಗಿಗಳಲ್ಲಿ ದತ್ತಾತ್ರೇಯನಂತೆ, ಸಮುದ್ರಗಳಲ್ಲಿ ಕ್ಷೀರಸಮುದ್ರದಂತೆ, ಗುರುಗಳಲ್ಲಿ ಪೂರ್ಣಪ್ರಜ್ಞರಂತೆ, ನಮ್ಮ ಗುರುಗಳಾದ ಶ್ರೀರಾಘವೇಂದ್ರರು ಇದ್ದಾರೆ. ಸೂರ್ಯನಂತೆ ತೇಜಸ್ವಿಗಳೂ, ಚಂದ್ರನಂತೆ ಶೀತಲರೂ, ಸಮುದ್ರದಂತೆ ಗಂಭೀರರೂ, ಪರ್ವತದಂತೆ ಅಚಲರೂ ಆದ ನಮ್ಮ ಗುರುಗಳು ಶಾರದೆಯ ದಯೆಯ ಸಹಾಯದಿಂದಲೇ ನಾನಾ ಶಾಸ್ತ್ರಪರಿಶೀಲನ ಮತ್ತು ನಾನಾ ಗ್ರಂಥಗಳ ರಚನೆಯನ್ನು ಮಾಡುತ್ತಾರೆ. ವೇದವ್ಯಾಖ್ಯಾನಾದಿಗಳಿಂದ ವೇದ-ಸಮೂಹವನ್ನು ಕಾಪಾಡುತ್ತಿರುವ ಶ್ರೀರಾಘವೇಂದ್ರತೀರ್ಥಗುರುಗಳನ್ನು ನೋಡಿ ವಿದ್ಯಾದೇವಿಯು ತನ್ನ ಪತಿಯಾದ ಶ್ರೀಮುಖ್ಯಪ್ರಾಣನ ವಿಶೇಷ ಸನ್ನಿಧಾನದಿಂದಲೇ ಇವರು ಅಸಾಧಾರಣವಾದ ಜ್ಞಾನಕಾರ್ಯವನ್ನು ನಡೆಸುತ್ತಿರು-ತ್ತಾರೆಂದು ಪ್ರತಿಕ್ಷಣದಲ್ಲಿಯೂ ತನ್ನ ಪತಿಯನ್ನು ವಿಶೇಷವಾಗಿ ಸ್ಮರಿಸುತ್ತಾ ಇವರಲ್ಲಿ ವಿಶೇಷಾನುಗ್ರಹವನ್ನು ಮಾಡುತ್ತಿರುತ್ತಾಳೆ. ಮುಖ್ಯಪ್ರಾಣನು ಮಾಡುವ ಕೆಲಸವನ್ನು ಆ ಮುಖ್ಯಪ್ರಾಣನ ಪ್ರೇರಣೆಯಿಂದ ಈ ಗುರುಗಳು ಮಾಡುತ್ತಿರುವುದೇ ಇದಕ್ಕೆ ಕಾರಣ.

ಕಲಿಕಾಲ ಬಲದಿಂದ ಮೂಲಸಹಿತ ಕತ್ತರಿಸಿ ಬಿದ್ದಿರುವ ವೇದ ವಿದ್ಯಾಲತೆಯು ಈ ರಾಘವೇಂದ್ರಗುರುಗಳ ಮಾತೆಂಬ ಅಮೃತದಿಂದ ಸಿಕ್ತವಾಗಿ ಉಜ್ಜೀವಿತವಾಯಿತು. ಶ್ರೀಗುರುರಾಜರೊಡನೆ ವಾದಮಾಡಲು ಬಂದ ವಿದ್ವಾಂಸರು ಅವರ ವಾಗ್ವೈಖರಿಯಿಂದ ಪರಾಜಿತರಾದರು. ಅವರ ಹಣೆಯಲ್ಲಿ ರೇಖೆಗಳು ಮೂಡಿಬಂದವು.

ಅದನ್ನು ನೋಡಿದರೆ ಈ ಗುರುವರ್ಯರು ನಮ್ಮನ್ನು ಸೋಲಿಸಿದರು, ನಾವು ಇವರಿಂದ ಸೋತೆವು , ಇವರು ವಾಗ್ಮಿವರ್ಯರು ಎಂಬ ಪರಾಜಯದ ಅಕ್ಷರಗಳನ್ನು ಹೊತ್ತ ಪ್ರತಿವಾದಿಗಳು ಅಷ್ಟದಿಕ್ಕುಗಳಿಗೂ ಓಡಿಹೋಗಿ ನಿಂತಾಗ ಅಲ್ಲೆಲ್ಲಾ ಶ್ರೀರಾಯರ ಜಯಸ್ತಂಭಗಳನ್ನು ನಿಲ್ಲಿಸಿದಂತಾಯಿತು. ಕವಿಗಳು ಆಕಾಶರೂಪವಾದುದರಿಂದ ಅವುಗಳನ್ನು ಶಾಸ್ತ್ರದಲ್ಲಿ ನಿತ್ಯವೆಂದು ಹೇಳುತ್ತಾರೆ. ಆದರೆ ಶ್ರೀಗುರುಗಳ ವಾಕ್ಕೆಂಬ ಅಮೃತದ ಸೇವನೆಯಿಂದಲೇ ಶ್ರೋತೃಗಳ ಶ್ರವಣಗಳು (ಕಿವಿಗಳು) ನಿತ್ಯವಾಗಿವೆ ಎಂದು ನಾನು ಹೇಳುತ್ತೇನೆ. ಪ್ರತಿವಾದಿವಿದ್ವಾಂಸರೆಂಬ ಸಮುದ್ರವನ್ನು ತನ್ನ ವಾದವೆಂಬ ಮಂದರಪರ್ವತದಿಂದ ಮಥಿಸಿ ನಮ್ಮ ಗುರುಗಳು ಕೀರ್ತಿಯೆಂಬ ಅಮೃತವನ್ನು ಪಡೆದರು. ಪರಮಾತ್ಮನ ವಿಶೇಷ ಸನ್ನಿಧಾನವುಳ್ಳ ಶಾಲಗ್ರಾಮದ ಬೆಳ್ಳಿ ಸಂಪುಟದಂತೆ ಬ್ರಹ್ಮಾಂಡದ ಹೊರಗೂ ಒಳಗೂ ನಮ್ಮ ಗುರುಗಳ ಕೀರ್ತಿಯು ಹರಡಿದೆ.

ನಮ್ಮ ಆದಿಗುರುಗಳಾದ ಶ್ರೀಮಧ್ವಾಚಾರ್ಯರು ತಮ್ಮ ಸಿದ್ಧಾಂತದ ಪ್ರತಿಷ್ಠಾಪನದಲ್ಲಿ ಪಂಡಿತರಾದ ಶ್ರೀರಾಘವೇಂದ್ರರು ಭೂಲೋಕದಲ್ಲಿ ವಿರಾಜಿಸುತ್ತಿರುವುದನ್ನು ನೋಡಿ ತಾನು ತಮ್ಮ ಗುರುಗಳಾದ ಶ್ರೀವೇದವ್ಯಾಸರ ಹತ್ತಿರ ನಿಶ್ಚಿಂತರಾಗಿರುವಂತಿದ್ದಾರೆ. ನಮ್ಮ ಗುರುಗಳು ಬ್ರಾಹ್ಮಣಸಮೂಹವನ್ನು ಚೆನ್ನಾಗಿ ಕಾಪಾಡುತ್ತಿರುವಾಗ ನೆಮ್ಮದಿಯಿಂದ ನಾರಾಯಣನು ಶೇಷಶಯನದಲ್ಲಿ ಸುಖವಾಗಿ ನಿದ್ರೆ ಮಾಡುತ್ತಾನೋ ಎಂಬಂತಿದ್ದಾನೆ. ತನ್ನನ್ನು ತಪಸ್ಸು ಮಾಡಿ ಸೇವಿಸುವವರಿಗೆ ಉತ್ತಮ ಸಂಪತ್ ಪ್ರದಾಯಕನಾದ ಶಂಕರನು ಸ್ಮರಣಮಾತ್ರದಿಂದಲೇ ಐಶ್ವರ್ಯಾದ್ಯಭೀಷ್ಟಗಳನ್ನೀಯುವ ನಮ್ಮ ಗುರುಗಳು ಶರಣಾಗತರಿಗೆ ಸಂಪತ್ತನ್ನು ಕೊಟ್ಟು ಕಾಪಾಡುತ್ತಿರುವುದನ್ನು ನೋಡಿ ತಾನು ನಿಶ್ಚಿಂತನಾಗಿ, (ಗಿರೀಶ ಎಂಬ ಹೆಸರನ್ನು ಹೊಂದಿ) ಕೈಲಾಸಗಿರಿ ಶಯನನಾಗಿದ್ದಾನೆ.

ನಮ್ಮ ಗುರುಗಳು ರಚಿಸಿರುವ ಶ್ರೀಬಾದರಾಯಣ ಸಮ್ಮತವಾದ ಶ್ರೀಮಧ್ವಾಚಾರ್ಯರಿಂದ ರಚಿತವಾದ ಭಾಷ್ಯಾನುಭಾಷ್ಯಾದಿಗಳ ವಿವರಣೆಯ ಅರ್ಥವನ್ನು ದೇವಲೋಕದಲ್ಲಿ ವಿದ್ವಾಂಸರಲ್ಲಿ ಪ್ರವಚನದಿಂದ ಪ್ರಖ್ಯಾತಪಡಿಸಿ ಬೃಹಸ್ಪತ್ಯಾಚಾರ್ಯರೂ, ಪಾತಾಳಲೋಕದ ವಿದ್ವಾಂಸರಲ್ಲಿ ಪ್ರಖ್ಯಾತಿಗೊಳಿಸಿ ಶೇಷನೂ ಪ್ರಸಿದ್ಧರಾಗಿದ್ದಾರೆ.

ನಮ್ಮ ಗುರುಗಳ ಮನಸ್ಸಿನ ಮೃದುತ್ವವನ್ನು ವಿಚಾರ ಮಾಡಿದಾಗ ಬೆಣ್ಣೆಯು ಕಲ್ಲಿನಂತೆ ಕಠಿಣ, ಗಾಂಭೀರ್ಯ-ವನ್ನು ವಿಚಾರ ಮಾಡಿದಾಗ ಆ ಸಮುದ್ರವು ಚಿಕ್ಕದಾದ ಭಾವಿಯು, ಶಾಸ್ತ್ರಪಾಂಡಿತ್ಯವನ್ನು ವಿಚಾರ ಮಾಡಿದಾಗ ದೇವತೆಗಳ ಗುರುಗಳಾದ ಬೃಹಸ್ಪತ್ಯಾಚಾರ್ಯರು ಗೌರವಾದರಗಳಿಂದ ಇವರಲ್ಲಿ ವಿದ್ಯಾಭ್ಯಾಸ ಮಾಡಲು ಬಯಸುತ್ತಾರೆ. ಔದಾರ್ಯವನ್ನು ವಿಚಾರ ಮಾಡಿದರೆ ಕಲ್ಪವೃಕ್ಷ ಕಾಮಧೇನು ಮುಂತಾದುವುಗಳೂ, ಇವರಲ್ಲಿ ಇಷ್ಟಾರ್ಥವನ್ನು ಬೇಡಲು ಆಲೋಚಿಸುತ್ತಿವೆ. ಅಂತಹ ಮಹಾನುಭಾವರು ನಮ್ಮ ಗುರುಗಳು. ಇಂತಹ ಮಹಾ-ಮಹಿಮರಾದ ಗುರುಗಳನ್ನು ವರ್ಣಿಸಲು ನಮ್ಮ ಮನಸ್ಸು ಆಸೆಪಡುತ್ತಿದೆ.

ಇಂತಹ ನಮ್ಮ ಗುರುಗಳು ಮೇಲಿನ ಗೌರವದಿಂದ ನಮ್ಮ ಕಾವ್ಯವನ್ನು ಸಜ್ಜನರು ಅಂಗೀಕರಿಸಬೇಕೆಂದು ನಮ್ಮ ಪ್ರಾರ್ಥನೆ. ಕಶ್ಯಪಗೋತ್ರವೆಂಬ ಸಮುದ್ರದಲ್ಲಿ ಚಂದ್ರನಂತೆ ಉದಯಿಸಿರುವ ಷಡ್‌ದರ್ಶಿನೀವಲ್ಲಭ ಎಂಬ ಬಿರುದಾಂಕಿತರಾದ ಶ್ರೀ ಲಕ್ಷ್ಮೀನರಸಿಂಹಾಚಾರ್ಯರಿಂದ ಶ್ರೀವೆಂಕಟಾಂಬಾ ಎಂಬ ಮಾತೃರತ್ನದ ಗರ್ಭದಿಂದ ಉದ್ಭೂತನಾದ, ತನ್ನ ತಂದೆಯ ದಯೆಯಿಂದಲೇ ಪ್ರಾಪ್ತವಾದ ಅಮೃತಮಯವಾದ ಮಾತುಳ್ಳ, ನಾರಾಯಣ-ನೆಂಬ ಪಂಡಿತನಿಂದ ರಚಿತವಾದ ಮನೋಹರವಾದ ಶ್ರೀರಾಘವೇಂದ್ರ ವಿಜಯವೆಂಬ ಮಹಾಕಾವ್ಯದಲ್ಲಿ ಮೊದಲನೆಯ ಸರ್ಗವೂ ಶೋಭಿಸುತ್ತದೆ.



॥ ಶ್ರೀಗುರುರಾಜೋ ವಿಜಯತೇ ॥

ವಿದ್ವತ್ಕವಿಕುಲತಿಲಕಶ್ರೀನಾರಾಯಣಾಚಾರ್ಯವಿರಚಿತಮ್

# ಶ್ರೀರಾಘವೇಂದ್ರವಿಜಯಮಹಾಕಾವ್ಯಮ್

## ಪ್ರಥಮಃ ಸರ್ಗಃ

ಶ್ರೀಲಕ್ಷ್ಮೀನರಸಿಂಹದೇವರ ನಖಸ್ತುತಿ

**ಶ್ರೀಮಲ್ಲಕ್ಷ್ಮೀನೃಸಿಂಹಸ್ಯ ಶ್ರಿಯಂ ದಿಶತು ಮೇ ನಖಃ ।**
**ಸ್ವಭಕ್ತಾಭೀಷ್ಟದಾನಾಯ ಸಮುಪಾತ್ತದಶಾಕೃತೇಃ ॥ 1 ॥**

**ಪದಚ್ಛೇದ –** ಶ್ರೀಮಲ್ಲಕ್ಷ್ಮೀನೃಸಿಂಹಸ್ಯ, ಶ್ರಿಯಂ, ದಿಶತು, ಮೇ, ನಖಃ, ಸ್ವಭಕ್ತಾಭೀಷ್ಟದಾನಾಯ, ಸಮು-ಪಾತ್ತದಶಾಕೃತೇಃ ।

**ಅನ್ವಯ –** ಸ್ವಭಕ್ತಾಭೀಷ್ಟದಾನಾಯ ಸಮುಪಾತ್ತದಶಾಕೃತೇಃ ಶ್ರೀಮಲ್ಲಕ್ಷ್ಮೀನೃಸಿಂಹಸ್ಯ ನಖಃ ಮೇ ಶ್ರಿಯಂ ದಿಶತು ।

**ಅನ್ವಯಾರ್ಥ—**

**ಸ್ವಭಕ್ತಾಭೀಷ್ಟದಾನಾಯ** — **ಸ್ವ** = ತನ್ನ **ಭಕ್ತ** = ಮುಕ್ತಿಯೋಗ್ಯ ಭಕ್ತರಿಗೆ, **ಅಭೀಷ್ಟದಾನಾಯ** = ಮೋಕ್ಷಾದಿ ಚತುರ್ವಿಧ ಪುರುಷಾರ್ಥಗಳನ್ನು ಕರುಣಿಸುವುದಕ್ಕಾಗಿ,

**ಸಮುಪಾತ್ತದಶಾಕೃತೇಃ** — **ಸಮುಪಾತ್ತ** = ಚೆನ್ನಾಗಿ ಸ್ವೀಕರಿಸಲ್ಪಟ್ಟ , **ದಶಾಕೃತೇಃ** = ಮತ್ಸ್ಯಾದಿ ದಶಾವತಾರವುಳ್ಳ,

**ಶ್ರೀಮಲ್ಲಕ್ಷ್ಮೀನೃಸಿಂಹಸ್ಯ** = ಶ್ರೀಮತ್ = ಸಂಪದ್ಯುಕ್ತರಾದ (ಕಾಂತಿಯುಕ್ತರಾದ)

**ಲಕ್ಷ್ಮೀನೃಸಿಂಹಸ್ಯ** = ಲಕ್ಷ್ಮೀನರಸಿಂಹದೇವರ,

**ನಖಃ** = ಉಗುರು,

**ಮೇ** = ನನಗೆ,

**ಶ್ರಿಯಂ** = ವೈದಿಕ ಲೌಕಿಕ ಸಂಪತ್ತನ್ನು ,

**ದಿಶತು** = ಕೊಡಲಿ.

**ತಾತ್ಪರ್ಯ –**

*ಅವತಾರಿಕಾ 1 –*

ಶ್ರೀಧೀರೇಂದ್ರತೀರ್ಥಶ್ರೀಪಾದಂಗಳವರ ಪೂರ್ವಾಶ್ರಮಪೌತ್ರರೂ, ವೇಣುಗೋಪಾಲಕೃಷ್ಣಾಚಾರ್ಯರ ಮಕ್ಕಳೂ, ದೇಶಿಕ ಗೋಪಾಲಕೃಷ್ಣಾಚಾರ್ಯರ ಶಿಷ್ಯರೂ ಆದ ವಿದ್ವತ್ಕುಲಲಲಾಮರಾದ ಶ್ರೀರಾಮಾಚಾರ್ಯರು

'ಬಾಲಬೋಧಿನೀ' ಎಂಬ ವ್ಯಾಖ್ಯಾನವನ್ನು ರಚಿಸಿ ಅದರಲ್ಲಿ ಶ್ರೀರಾಘವೇಂದ್ರವಿಜಯ ಮಹಾಕಾವ್ಯದ ಪ್ರಥಮ ಸರ್ಗದ ಪ್ರಥಮ ಶ್ಲೋಕಕ್ಕೆ ಈ ರೀತಿ ಅವತರಣಿಕೆಯನ್ನು ಕೊಡುತ್ತಿದ್ದಾರೆ—

''ಶ್ರೀರಾಘವೇಂದ್ರಗುರುಸಾರ್ವಭೌಮರ ಪೂರ್ವಾಶ್ರಮದ ಭಾಗಿನೇಯ(ಸೋದರಳಿಯ)ರಾದ ಕವಿಕುಲ-ತಿಲಕರಾದ ಶ್ರೀನಾರಾಯಣಾಚಾರ್ಯರು ಶ್ರೀರಾಘವೇಂದ್ರವಿಜಯವೆಂಬ ಮಹಾಕಾವ್ಯವನ್ನು ರಚಿಸಲು ಅಪೇಕ್ಷಿಸಿ, ಆ ಮಹಾಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತವಾಗುವುದಕ್ಕೋಸ್ಕರ ತಮ್ಮ ಕುಲದೇವತೆಯಾದ ಶ್ರೀಲಕ್ಷ್ಮೀ-ನರಸಿಂಹದೇವರ ನಖವನ್ನು (ಉಗುರನ್ನು) ಸ್ತುತಿಸುತ್ತಾ 'ಸಂಪತ್ತನ್ನು ಕೊಡಲಿ' ಎಂಬ ಪ್ರಾರ್ಥನಾರೂಪವಾದ ಮಂಗಳವನ್ನು ಆದಿಯಲ್ಲಿ ಆಚರಿಸಿದ್ದಾರೆ''.

*ಅವತಾರಿಕಾ 2 –*

ಶ್ರೀಗುರುಸಾರ್ವಭೌಮರ ಪೂರ್ವಾಶ್ರಮ ವಂಶಬಂಧುಗಳಾದ ನ್ಯಾಯಾಲಯ ಪಂಡಿತರಾದ (ಕೋರ್ಟು) ಶ್ರೀರಾಘವೇಂದ್ರಾಚಾರ್ಯರೆಂಬುವರು ರಚಿಸಿದ 'ಗುರುಪಾದಸೇವಾ' ಎಂಬ ವ್ಯಾಖ್ಯಾನದಲ್ಲಿ ಈ ರೀತಿಯಾಗಿ ಅವತರಣಿಕೆ ಇದೆ. ''ಮೋಕ್ಷವು ಎಲ್ಲಾ ಪುರುಷಾರ್ಥಗಳಲ್ಲಿ ಶ್ರೇಷ್ಠವಾದುದು. ಅದು ಭಗವಂತನ ಪ್ರಸಾದದಿಂದಲೇ ಲಭ್ಯವಾಗುತ್ತದೆ. ಭಗವಂತನ ಪ್ರಸಾದವು ಅವನ ಅಪರೋಕ್ಷಜ್ಞಾನದಿಂದಲೇ ಪ್ರಾಪ್ತವಾಗುತ್ತದೆ. ಅಪರೋಕ್ಷಜ್ಞಾನಕ್ಕೆ ಭಕ್ತಿಯೇ ಮುಖ್ಯ ಸಾಧನ. ಮಾಹಾತ್ಮ್ಯಜ್ಞಾನಪೂರ್ವಕವಾದ ಸುದೃಢ ಸ್ನೇಹವೇ ಭಕ್ತಿಯಾದುದರಿಂದ ಭಕ್ತಿಯು ಹುಟ್ಟಲು ಪರಮಾತ್ಮನ ಮಹಿಮೆಯ ಜ್ಞಾನವು ಆಗಬೇಕು. ಪ್ರಸನ್ನರಾದ ಗುರುಗಳ ಉಪದೇಶದಿಂದಲೇ ಪರಮಾತ್ಮನ ಮಹಿಮೆಯ ಜ್ಞಾನವು ಹುಟ್ಟುತ್ತದೆ. ಗುರುಪ್ರಸಾದವಾಗಬೇಕಾದರೆ ಗುರುಭಕ್ತಿಯು ಬೇಕು. ಗುರುಭಕ್ತಿಯು ಗುರುಗಳ ಮಾಹಾತ್ಮ್ಯಜ್ಞಾನದಿಂದ ಹುಟ್ಟುತ್ತದೆ. ಆದುದರಿಂದ ಗುರುಗಳ ಮಾಹಾತ್ಮ್ಯವನ್ನು ಪ್ರತಿಪಾದಿಸಲು ಶ್ರೀನಾರಾಯಣಾಚಾರ್ಯರೆಂಬ ಪಂಡಿತ ಕವಿಗಳು ಶ್ರೀರಾಘವೇಂದ್ರವಿಜಯವೆಂಬ ಮಹಾಕಾವ್ಯವನ್ನು ರಚಿಸಲು ಬಯಸಿದ್ದಾರೆ''.

ಕಾವ್ಯಂ ಯಶಸೇಽರ್ಥಕೃತೇ ವ್ಯವಹಾರವಿದೇ ಶಿವೇತರಕ್ಷತಯೇ ।
ಸದ್ಯಃ ಪರನಿರ್ವೃತಯೇ ಕಾಂತಾಸಂಮಿತತಯೋಪದೇಶಯುಜೇ ॥

ಕಾವ್ಯದಿಂದ ಕೀರ್ತಿಯೂ, ಅರ್ಥಪ್ರಾಪ್ತಿಯೂ, ವ್ಯವಹಾರಜ್ಞಾನವೂ, ಅನಿಷ್ಟನಿವೃತ್ತಿಯೂ, ಪಠನ ಮತ್ತು ಅರ್ಥಾನುಸಂಧಾನ ಸಮಯದಲ್ಲಿಯೇ ಬ್ರಹ್ಮಾನಂದ ಸಹೋದರವಾದ ಆನಂದಾನುಭವವೂ ಉಂಟಾಗುತ್ತದೆ. ಅಷ್ಟೇ ಅಲ್ಲ (1) ಪ್ರಭುಸಮ್ಮಿತವಾದ ವೇದೋಪದೇಶ, ಹೀಗೆ ಮಾಡು ಹೀಗೆ ಮಾಡಬೇಡ ಎಂಬ ಆಜ್ಞಾವಚನ, (2) ಮಿತ್ರಸಮ್ಮಿತವಾದ ಪುರಾಣೋಪದೇಶ ರಾಮಾದಿಗಳಂತಿರಬೇಕು,ರಾವಣಾದಿಗಳಂತಿರಬಾರದು ಎಂಬ ಪುರಾಣೋಪದೇಶ (3) ಇವರೆಡು ಉಪದೇಶಗಳಿಗಿಂತ ವಿಲಕ್ಷಣವಾದ ಕಾಂತಾಸಮ್ಮಿತೋಪದೇಶ. 'ಅಂದರೆ ಕಾಂತೆಯು ಮಾತಿಲ್ಲದೆ, ಮಾತಾಡಿದರೂ ಸ್ವಲ್ಪವೇ ಸೂಚ್ಯಾರ್ಥಗರ್ಭಿತವಾದ ಮಾತನ್ನಾಡಿ ತನ್ನ ಮೃದು ಮಧುರ ವಚನವಿನ್ಯಾಸ ಕಟಾಕ್ಷ, ವೀಕ್ಷಣಾದಿಗಳಿಂದ ಕಾಂತನನ್ನು ತನ್ನ ಮಾತನ್ನು ಕೇಳುವಂತೆ ಮಾಡಿ ಕರ್ತವ್ಯದಲ್ಲಿ ತತ್ಪರನನ್ನಾಗಿ ಮಾಡುತ್ತಾಳೆ. ಅಕರ್ತವ್ಯವನ್ನು ಮಾಡದಂತೆ ತಡೆಯುತ್ತಾಳೆ. ಈ ಕಾಂತಾಸಮ್ಮಿತೋಪದೇಶವೂ ಕಾವ್ಯದಲ್ಲಿ ಸಿಗುತ್ತದೆ. ಕಾವ್ಯಶ್ರವಣ ಮತ್ತು ಅರ್ಥಾನುಸಂಧಾನದಿಂದ ವಿಜ್ಞಾನವು ವೃದ್ಧಿಹೊಂದುತ್ತದೆ. ಉತ್ತಮ ಕೀರ್ತಿಯು ಲಭಿಸುತ್ತದೆ. ಒಳ್ಳೆಯ ಗುಣಗಳು ಉಂಟಾಗುತ್ತದೆ. ಮಹಾಪುರುಷರ ಚರಿತ್ರೆಯ ಶ್ರವಣವಾಗುತ್ತದೆ. ಆದುದರಿಂದ ಕಾವ್ಯ ಸಂಲಾಪಗಳಿಂದ ಬಹಳ ಪ್ರಯೋಜನಗಳಿವೆ. ಹೀಗಿರುವುದರಿಂದ ಈ ಒಂದೊಂದೂ ಕಾರಣಗಳಿಂದ ಕಾವ್ಯಗಳು ಸಹೃದಯರ ಮನಸ್ಸನ್ನು ಅಪಹರಿಸುತ್ತವೆ. ಎಲ್ಲವೂ ಇರುವಾಗ ಏನು ಕೇಳಬೇಕು ?

ಪರಿವರ್ಧತ ವಿಜ್ಞಾನಂ ಸಂಭಾವ್ಯತೇ ಯಶಃ ಆರ್ಜ್ಯಂತೇ ಗುಣಾಃ ।
ಶ್ರೂಯತೇ ಸುಪುರುಷಚರಿತಂ ಕಿಂ ತದ್ಯೇನ ನ ಹರಂತಿ ಕಾವ್ಯಾಲಾಪಾಃ ॥

(ನ ಹರಂತಿ ಮನ ಇತಿ ಶೇಷಃ) ಎಂಬ ಈ ಆಲಂಕಾರಿಕ ವಚನದಂತೆ ಕಾವ್ಯವು ಅನೇಕ ವಿಧವಾದ ಶ್ರೇಯಸ್ಸುಗಳಿಗೆ ಸಾಧನವಾಗಿದೆ. ಆದರೆ 'ಕಾವ್ಯಾಲಾಪಾಂಶ್ಚ ವರ್ಜಯೇತ್' ಎಂದು ಕಾವ್ಯದ ವಿಷಯದ ಸಲ್ಲಾಪಗಳನ್ನು ಬಿಡಬೇಕು' ಎಂದು ಕಾವ್ಯಪಠನಾದಿಗಳನ್ನು ನಿಷೇಧಿಸಿದ್ದಾರೆ. ಆದ್ದರಿಂದ ಈ ಕಾವ್ಯವು ಸಾತ್ತ್ವಿಕಾ-ಧಿಕಾರಿಗಳಿಗೆ ಗ್ರಾಹ್ಯವಲ್ಲ ಎಂಬ ಶಂಕೆಯು ಬರಬಹುದು. ಈ ನಿಷೇಧವು 'ಕೇವಲ ಲೌಕಿಕ ವಿಷಯವರ್ಣನ ಪರವಾದ ಅಸತ್ಕಾವ್ಯವನ್ನು ಪಠಿಸಬಾರದು' ಎಂದು ಹೇಳುತ್ತದೆಯೇ ಹೊರತು ಸತ್ಕಾವ್ಯಪಠನಕ್ಕೆ ನಿಷೇಧವಿಲ್ಲ. ಆದುದರಿಂದ ಸತ್ಕಾವ್ಯ ವಿಚಾರವು ಅವಶ್ಯ ಕರ್ತವ್ಯವೆಂದು ಭಾವಿಸಿ ಈ ಕವಿಗಳು ತಾವು ಮಾಡಲಿರುವ ಪ್ರಬಂಧವು ಯಾವ ವಿಘ್ನವೂ ಇಲ್ಲದೆ ಸಮಾಪ್ತಿಯಾಗುವುದಕ್ಕೂ, ಗ್ರಂಥ ಪ್ರಸಿದ್ಧಿಗಾಗಿಯೂ

ಮಂಗಲಂ ತ್ರಿವಿಧಂ ಪ್ರೋಕ್ತಂ ಶಾಸ್ತ್ರಾದೀನಾಂ ಮುಖಾದಿಷು ।
ಆಶೀರ್ನಮಸ್ಕ್ರಿಯಾ ವಸ್ತುನಿರ್ದೇಶೋ ವಾಽಪಿ ತನ್ಮುಖಮ್ ॥

ಎಂಬ ಕಾವ್ಯಾದರ್ಶ ವಚನದಂತೆ ಆಶೀರ್ವಚನ (ಇಷ್ಟಪ್ರಾರ್ಥನೆ) ನಮಸ್ಕಾರ ಮತ್ತು ಲೋಕೋತ್ತರ ವಸ್ತುವಿನ ನಿರ್ದೇಶ ಈ ಮೂರರಲ್ಲಿ 'ಇಷ್ಟಪ್ರಾರ್ಥನಾರೂಪವಾದ 'ಆಶೀಃ' ಎಂಬ ಮಂಗಳವನ್ನು ಆದಿಯಲ್ಲಿ ಆಚರಿಸುತ್ತಿದ್ದಾರೆ. 'ಶ್ರೀಲಕ್ಷ್ಮೀನರಸಿಂಹದೇವರು ಕಾಂತಿ, ಸಂಪತ್ತುಗಳಿಂದ ಕೂಡಿದವರು. ಅವರು ಯಾವಾಗಲೂ ಸಕಲವಾಕ್ ಮತ್ತು ಮನಸ್ಸುಗಳಿಗೆ ಅಭಿಮಾನಿದೇವತೆಯಾದ ಲಕ್ಷ್ಮೀದೇವಿಯಿಂದ ಕೂಡಿಕೊಂಡೇ ಇರುತ್ತಾರೆ. ಈ ನರಸಿಂಹದೇವರು ಸಾತ್ತ್ವಿಕರಾದ ತನ್ನ ಭಕ್ತರಿಗೆ ಧರ್ಮಾದಿ ಚತುರ್ವಿಧ ಪುರುಷಾರ್ಥಗಳನ್ನು ಕೊಡುವುದಕ್ಕಾಗಿ ಮತ್ಸ್ಯಾದಿ ದಶಾವತಾರಗಳನ್ನು ಸ್ವೀಕರಿಸಿದ್ದಾರೆ. ಆ ದೇವರ ನಖಕ್ಕೆ (ಉಗುರು) ದೇವರಿಗೆ ಸವಿಶೇಷಾಭೇದವಿದೆ. ದೇವರಿಗೂ ಅವನ ಉಗುರಿಗೂ ಭೇದವಿಲ್ಲ. ಆದ್ದರಿಂದ ಪರಮಾತ್ಮನು ಹೇಗೆ ದಶಾವತಾರಗಳನ್ನು ಸ್ವೀಕರಿಸಿದನೋ ಅದರಂತೆ ಪರಮಾತ್ಮನ ನಖವೂ ಕೂಡ ಹಿರಣ್ಯಕಶಿಪುವಿನ ಹೊಟ್ಟೆಯ ಸೀಳುವಿಕೆ ಮುಂತಾದುವುಗಳ ಮೂಲಕ ಪ್ರಹ್ಲಾದಾದಿ ಭಕ್ತರ ಅಭೀಷ್ಟದಾನಕ್ಕೋಸ್ಕರ ಹತ್ತು ರೂಪಗಳನ್ನು ಸ್ವೀಕರಿಸಿದೆಯೋ ಎಂಬಂತೆ ಇದೆ. ಅಂತಹ ಲಕ್ಷ್ಮೀನರಸಿಂಹದೇವರ ಅದ್ಭುತವಾದ ನಖವು ನನಗೆ ವೈದಿಕ ಲೌಕಿಕ ಸಂಪತ್ತನ್ನೂ, ಶಬ್ದಾರ್ಥಸಂಪತ್ತನ್ನೂ ಕೊಡಲಿ' ಎಂದು ಪ್ರಾರ್ಥಿಸಿದ್ದಾರೆ.

ವಿಶೇಷಾಂಶ — 'ನಖವು' ಒಂದು. ಇಲ್ಲಿ 'ನಖಃ' ಎಂದು ಏಕವಚನ ಪ್ರಯೋಗದಿಂದ ಇದು ತಿಳಿದುಬರುತ್ತದೆ. ಭಕ್ತರು ಬಹಳ ಮಂದಿ. ಒಂದು ನಖವು ಅನೇಕ ಮಂದಿ ಭಕ್ತರಿಗೆ ಅಭೀಷ್ಟಪೂರಣವನ್ನು ಹೇಗೆ ಮಾಡುತ್ತದೆ ಎಂಬ ಶಂಕಾಪರಿಹಾರಕ್ಕಾಗಿ ಸ್ವಭಕ್ತಾಭೀಷ್ಟದಾನಾಯ ಸಮುಪಾತ್ತದಶಾಕೃತೇಃ' ಎಂದಿದ್ದಾರೆ . ಒಂದೇ ರೂಪದಿಂದ ಅನೇಕ ಭಕ್ತರ ಅಭೀಷ್ಟದಾನ ಮಾಡುವ ಸಾಮರ್ಥ್ಯವಿದ್ದರೂ ಭಕ್ತರಲ್ಲಿ ವಾತ್ಸಲ್ಯಾತಿಶಯದಿಂದ ತಾನು ಕೊಟ್ಟದ್ದು ಅಲ್ಪ , ಬಹಳವಾಗಿ ಕೊಡಬೇಕೆಂದು ಹತ್ತು ಆಕೃತಿಗಳನ್ನು ನರಸಿಂಹದೇವರಂತೆ ಆ ನಖವೂ ಸ್ವೀಕರಿಸಿದೆ ಎಂದು ಸೂಚಿಸಿದ್ದಾರೆ. 'ಸಮುಪಾತ್ತದಶಾಕೃತೇಃ ನಖಃ' ಎಂಬಲ್ಲಿ 'ರಾಹೋಃ ಶಿರಃ' ರಾಹುವೇ ಶಿರಸ್ಸು ಎಂಬಂತೆ ಅಭೇದಾರ್ಥದಲ್ಲಿ ಷಷ್ಠೀ ಇಟ್ಟುಕೊಳ್ಳಬೇಕು.

ಇಲ್ಲಿ ಆದಿಯಲ್ಲಿ 'ಶ್ರೀ' ಎಂದು ಲಕ್ಷ್ಮೀಬೀಜವಾದ ಶಕಾರವನ್ನೂ , ಕ್ಷೇಮವನ್ನುಂಟು ಮಾಡುವ ಭೂದೇವ-ತಾಕವಾದ ಮಗಣವನ್ನೂ (ಶ್ರೀಮಲ್ಲಕ್ಷ್ಮೀ) ಪ್ರಯೋಗಿಸಿದ್ದಾರೆ. ಇದರಿಂದ ಈ ಕಾವ್ಯಪಠನದಿಂದ ಶ್ರೀಪ್ರಾಪ್ತಿ ಮತ್ತು

ಭೂಪ್ರಾಪ್ತಿಯಾಗುತ್ತದೆಂದು ತಿಳಿದು ಬರುತ್ತದೆ. 'ಲಕ್ಷ್ಮೀಬೀಜಂ ಶಕಾರಃ ಸ್ಯಾತ್ ಶ್ಯಾಮಾಭಃ ಶ್ರೀಕಾರೋ ಮತಃ,' 'ಕ್ಷೇಮಂ ಸರ್ವಗುರುರ್ದತ್ತೇ ಮಗಣೋ ಭೂಮಿದೈವತಃ', 'ವರ್ಣಂ ಗಣಂ ಚ ಕಾವ್ಯಸ್ಯ ಮುಖೇ ಕುರ್ಯಾತ್ ಸುಶೋಭನಮ್ । ಕರ್ತೃಕಾರಕಯೋಸ್ತೇನ ಕಲ್ಯಾಣಮುಪಜಾಯತೇ ॥' ಶಕಾರವು ಲಕ್ಷ್ಮೀಬೀಜಾಕ್ಷರ ಶ್ಯಾಮ-ವರ್ಣವುಳ್ಳದ್ದು, ಸಂಪತ್‌ಕರ, ಭೂಮಿದೇವತಾಕವಾದ ಸರ್ವಗುರು ಮಗಣವು ಕ್ಷೇಮವನ್ನುಂಟುಮಾಡು-ತ್ತದೆಯೆಂದೂ , ಕಾವ್ಯದ ಆರಂಭದಲ್ಲಿ ಶುಭವರ್ಣ ಮತ್ತು ಗುಣಗಳನ್ನು ಪ್ರಯೋಗಿಸಬೇಕು, ಅದರಿಂದ ಗ್ರಂಥ-ಕರ್ತೃವಿಗೂ, ಪಾಠಕರಿಗೂ ಮಂಗಳವುಂಟಾಗುತ್ತದೆಯೆಂದೂ ಆಲಂಕಾರಿಕರು ಹೇಳುತ್ತಾರೆ.

''ಸಂಯೋಗಃ ಸರ್ವದಾ ತ್ಯಾಜ್ಯಃ ವರ್ಣಾನಾಂ ಕವಿನಾ ಮುಖೇ'' ಎಂದು ಗ್ರಂಥಾದಿಯಲ್ಲಿ ಸಂಯುಕ್ತ ವರ್ಣವನ್ನು ಪ್ರಯೋಗಿಸಬಾರದೆಂದು ಹೇಳಿದ್ದಾರೆ. ಆದರೂ ಆ ನಿಷೇಧವು 'ಶ್ರೀ' ಶಬ್ದಾದಿಗಳನ್ನು ಬಿಟ್ಟು ಇತರ ಶಬ್ದಗಳಿಗೆ ಎಂದು ತಿಳಿಯಬೇಕು. ಏಕೆಂದರೆ 'ದೇವತಾವಾಚಕಾಃ ಶಬ್ದಾಃ ಯೇ ಚ ಭದ್ರಾದಿವಾಚಕಾಃ । ತೇ ಸರ್ವೇ ನೈವ ನಿಂದ್ಯಾಃ ಸ್ಯುಃ ಲಿಪಿತೋ ಗಣತೋಽಪಿ ವಾ ॥' ದೇವತಾವಾಚಕಶಬ್ದಗಳು. ಮಂಗಳವಾಚಕ ಶಬ್ದಗಳೂ ವರ್ಣದೋಷ ಮತ್ತು ಗಣದೋಷದಿಂದ ಕೂಡಿದ್ದರೂ ನಿಂದಾರ್ಹವಲ್ಲ ಎಂಬ ವಚನವಿದೆ. ಆದ್ದರಿಂದಲೇ 'ಶ್ರಿಯಃ ಪತಿಃ ಶ್ರೀಮತಿ ಎಂಬುದಾಗಿ ಮಹಾಕವಿಗಳ (ಶಿಶುಪಾಲವಧ ಮಾಘಕವಿ) ಪ್ರಯೋಗವು ಕೂಡುತ್ತದೆ ಎಂದು ತಿಳಿಯತಕ್ಕದ್ದು .

**ಅಲಂಕಾರ** — ಶ್ರೀಲಕ್ಷ್ಮೀನರಸಿಂಹದೇವರ ನಖವು ದಶಾವತಾರಗಳನ್ನು ಸ್ವೀಕರಿಸಿರುವುದಕ್ಕೆ ಭಕ್ತರ ಅಭೀಷ್ಟದಾನವು ಫಲವಲ್ಲದಿದ್ದರೂ ಅದನ್ನು ಫಲವೆಂದು ಸಂಭಾವಿಸಿದ್ದಾರೆ – ಉತ್ಪ್ರೇಕ್ಷಿಸಿದ್ದಾರೆ. ಆದುದರಿಂದ ಇಲ್ಲಿ ಫಲೋತ್ಪ್ರೇಕ್ಷಾಲಂಕಾರವಿದೆ. ಶ್ರೀಮತ್ಸುಧೀಂದ್ರತೀರ್ಥ ವಿರಚಿತ ಅಲಂಕಾರಮಂಜರಿಯಲ್ಲಿ ಹೇಳಿರುವಂತೆ ಉತ್ಪ್ರೇಕ್ಷೆಯ ಲಕ್ಷಣ—

ಉತ್ಪ್ರೇಕ್ಷಾಃ ಸ್ಯುಃ ಹೇತುಫಲವಸ್ತುಸಂಭಾವನಾತ್ ದ್ವಿಧಾ ।
ಸಿದ್ಧಾಸಿದ್ಧಾಶ್ರಯೇ ಪೂರ್ವೇ ಪರೋಕ್ತಾನುಕ್ತಿಸಂಶ್ರಯಾತ್ ॥

ಇಲ್ಲಿ 'ಸ್ವಭಕ್ತಾಭೀಷ್ಟದಾನಾಯ' ಎಂಬ ಪದದಿಂದ ಸೂಚ್ಯವಾದ ಅರ್ಥವನ್ನು ಸೂಚಿಸಿದ್ದಾರೆ. ಸ್ವಭಕ್ತ = ಶ್ರೀಲಕ್ಷ್ಮೀನರಸಿಂಹದೇವರ ಭಕ್ತರಾದ ಶ್ರೀರಾಘವೇಂದ್ರತೀರ್ಥಗುರುವರ್ಯರು, ಇವರ ಅಭೀಷ್ಟ = ಅಂದರೆ ತನ್ನ ಪಾದಕಮಲವನ್ನು ಸೇವಿಸುವವರಿಗೆ ಜ್ಞಾನ, ಸಂಪತ್ತು, ರೋಗಪರಿಹಾರ, ಮಹಾಪಾತಕಗಳ ಪರಿಹಾರ, ಬುದ್ಧಿವೈಶದ್ಯ, ಒಳ್ಳೆಯ ವಾಗ್ಮಿತ್ವ, ಶತ್ರುಪರಾಜಯ, ಆಲೋಚಿಸಿದ ವಿಷಯವನ್ನು ನೆರವೇರಿಸಿ ಕೊಡುವುದು ಇದೇ ಲಕ್ಷ್ಮೀನರಸಿಂಹದೇವರ ಪರಮಭಕ್ತರಾದ ಶ್ರೀರಾಘವೇಂದ್ರತೀರ್ಥ ಗುರುರಾಜರ ಅಭೀಷ್ಟಗಳು, ಇವುಗಳ ದಾನಾಯ = ಅಂದರೆ ಕೊಡುವುದಕ್ಕೋಸರ, ಶ್ರೀಲಕ್ಷ್ಮೀನರಸಿಂಹ ದೇವರ ಪರಮಾನುಗ್ರಹಕ್ಕೆ ಪಾತ್ರರಾದ ಶ್ರೀರಾಘವೇಂದ್ರ ಗುರುವರ್ಯರ ಅನುಗ್ರಹದಿಂದ ಭಕ್ತರಿಗೆ, ಅವರ ಚರಣಕಮಲಗಳ ಸೇವನೆಯಿಂದ ಅಥವಾ ಸ್ಮರಣೆಯಿಂದ ಸಕಲಪುರುಷಾರ್ಥಗಳೂ ಲಭಿಸುತ್ತವೆ ಎಂಬ ಅರ್ಥವು ಸೂಚಿತವಾಗುತ್ತದೆ. ಆದುದರಿಂದ ಇಲ್ಲಿ 'ಮುದ್ರಾಲಂಕಾರ' ಎಂಬ ಅಲಂಕಾರವಿದೆ.

ಸೂಚ್ಯಾರ್ಥಸೂಚನಂ ಮುದ್ರಾಪ್ರಕೃತಾರ್ಥಪರೈಃ ಪದೈಃ ।
ಚಂದ್ರಾದನ್ಯೋ ವಿಪುಲಾರ್ಥಾನಾಂ ನಾನ್ಯೋಽಸ್ತಿ ವಿಜಯೀಂದ್ರತಃ ॥

(ಅಲಂಕಾರಮಂಜರೀ) ॥

ವಿಗ್ರಹ—

**ಶ್ರೀಲಕ್ಷ್ಮೀನೃಸಿಂಹಸ್ಯ—** ಶ್ರೀಃ ಅಸ್ಯ ಅಸ್ತೀತಿ ಶ್ರೀಮತೀ ಲಕ್ಷ್ಮೀಃ ಯಸ್ಯ ಸಃ ಶ್ರೀಮಲ್ಲಕ್ಷ್ಮೀಃ, (ನಾ ಸಿಂಹಃ ಇವ ನೃಸಿಂಹಃ) ಶ್ರೀಮಲ್ಲಕ್ಷ್ಮೀಶ್ಚಾಸೌ ನೃಸಿಂಹಶ್ಚ ಶ್ರೀಮಲ್ಲಕ್ಷ್ಮೀನೃಸಿಂಹಃ, ತಸ್ಯ. ಅಥವಾ ಶ್ರೀಮತೀ ಚಾಸೌ ಲಕ್ಷ್ಮೀಶ್ಚ ಶ್ರೀಮಲ್ಲಕ್ಷ್ಮೀಃ, ತಯಾ ಸಹಿತಃ ನೃಸಿಂಹಃ ಶ್ರೀಮಲ್ಲಕ್ಷ್ಮೀನೃಸಿಂಹಃ. ಅಥವಾ ಲಕ್ಷ್ಮೀಸಹಿತಃ ನೃಸಿಂಹಃ ಲಕ್ಷ್ಮೀನೃಸಿಂಹಃ, ಶ್ರೀಮಾಂಶ್ಚಾಸೌ ಲಕ್ಷ್ಮೀನೃಸಿಂಹಶ್ಚ ಶ್ರೀಮಲ್ಲಕ್ಷ್ಮೀ- ನೃಸಿಂಹಃ, ತಸ್ಯ ಶ್ರೀಲಕ್ಷ್ಮೀನೃಸಿಂಹಸ್ಯ ।

**ಸ್ವಭಕ್ತಾಭೀಷ್ಟದಾನಾಯ—** ಸ್ವಸ್ಯ ಭಕ್ತಾಃ ಸ್ವಭಕ್ತಾಃ ಸ್ವಭಕ್ತಾನಾಂ ಅಭೀಷ್ಟಂ ಸ್ವಭಕ್ತಾಭೀಷ್ಟಂ. ಸ್ವಭಕ್ತಾ-ಭೀಷ್ಟಸ್ಯ ದಾನಂ ಸ್ವಭಕ್ತಾಭೀಷ್ಟದಾನಂ, ತಸ್ಮೈ ಸ್ವಭಕ್ತಾಭೀಷ್ಟದಾನಾಯ ।

**ಸಮುಪಾತ್ತದಶಾಕೃತೇಃ—** ಸಮ್ಯಕ್ ಉಪಾತ್ತಾಃ ಸಮುಪಾತ್ತಾಃ, ದಶ ಚ ತಾಃ ಆಕೃತಯಶ್ಚ ದಶಾಕೃತಯಃ, ಸಮುಪಾತ್ತಾಃ ದಶಾಕೃತಯಃ ಯೇನ ಸಃ ಸಮುಪಾತ್ತದಶಾಕೃತಿಃ, ತಸ್ಯ ಸಮುಪಾತ್ತದಶಾಕೃತೇಃ ।

**ಕ್ರಿಯಾಪದ** — ದಿಶತು, ದಿಶತಾತ್, ದಿಶತಾಂ, ದಿಶಂತು । ದಿಶ, ದಿಶತಾತ್, ದಿಶತಂ, ದಿಶತ । ದಿಶಾನಿ, ದಿಶಾವ, ದಿಶಾಮ ॥ ದಿಶ ಅತಿಸರ್ಜನೇ ಇತಿ ಅತಿಸರ್ಜನಾರ್ಥಕಾತ್ (ದಾನಾರ್ಥಕಾತ್) ದಿಶ್‌ಧಾತೋಃ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ, ಪ್ರಾರ್ಥನಾಯಾಂ ಲೋಟ್ ಪ್ರಥಮಪುರುಷೇ ಏಕವಚನೇ 'ದಿಶತು' ಇತಿ ರೂಪಮ್.

**ಪ್ರಯೋಗ** — ನಖಃ ಶ್ರಿಯಂ ದಿಶತು (ಕರ್ತರಿ). ನಖೇನ ಶ್ರೀಃ ದಿಶ್ಯತಾಂ (ಕರ್ಮಣಿ). ಉಗುರಿನಿಂದ ಸಂಪತ್ತು ಕೊಡಲ್ಪಡಲಿ.

★ ★ ★

ಈಗ ಕವಿಗಳು ತಮ್ಮ ಉಪಾಸ್ಯಮೂರ್ತಿಯಾದ ನವನೀತ (ಬೆಣ್ಣೆ) ಕೃಷ್ಣನನ್ನು ಪ್ರಾರ್ಥಿಸುತ್ತಿದ್ದಾರೆ—

**ವಸ್ತು ಸ್ತುತಂ ಸುರಸ್ತೋಮೈರಸ್ತು ಶಸ್ತಂ ಮಯಾ ಸ್ತುತಮ್ ।**
**ಮಸ್ತುಹಸ್ತಂ ಪ್ರಸ್ತುತಾಯ ಶ್ರುತಿಮಸ್ತಕವಿಶ್ರುತಮ್ ॥ 2 ॥**

**ಪದಚ್ಛೇದ—** ವಸ್ತು ಸ್ತುತಂ ಸುರಸ್ತೋಮೈಃ, ಅಸ್ತು, ಶಸ್ತಂ, ಮಯಾ, ಸ್ತುತಂ, ಮಸ್ತುಹಸ್ತಂ, ಪ್ರಸ್ತುತಾಯ, ಶ್ರುತಿಮಸ್ತಕವಿಶ್ರುತಮ್ ।

**ಅನ್ವಯ** — ಸುರಸ್ತೋಮೈಃ ಸ್ತುತಂ ಶಸ್ತಂ ಮಯಾ ಸ್ತುತಂ ಮಸ್ತುಹಸ್ತಂ ಶ್ರುತಿಮಸ್ತಕವಿಶ್ರುತಂ, ವಸ್ತು ಪ್ರಸ್ತುತಾಯ ಅಸ್ತು ।

**ಅನ್ವಯಾರ್ಥ—**

**ಸುರಸ್ತೋಮೈಃ** = ದೇವತೆಗಳ ಸಮೂಹಗಳಿಂದ,
**ಸ್ತುತಂ** = ಹೊಗಳಲ್ಪಟ್ಟ
**ಶಸ್ತಂ** = ಪ್ರಶಸ್ತವಾದ, (ಸರ್ವೋತ್ತಮವಾದ)

**ಮಯಾ** = ಲಕ್ಷ್ಮೀದೇವಿಯಿಂದ (ನನ್ನಿಂದ)

**ಸ್ತುತಂ** = ಸ್ತೋತ್ರ ಮಾಡಲ್ಪಟ್ಟ

**ಮಸ್ತುಹಸ್ತಂ** — **ಮಸ್ತು** = ಕೆನೆ ಬೆಣ್ಣೆಯು, **ಹಸ್ತಂ** = ಕೈಯಲ್ಲಿ ಉಳ್ಳ

**ಶ್ರುತಿಮಸ್ತಕವಿಶ್ರುತಂ** — **ಶ್ರುತಿ** = ವೇದಗಳ, **ಮಸ್ತಕ** = ಶಿರೋಭಾಗದಂತಿರುವ ಉಪನಿಷತ್ತುಗಳಲ್ಲಿ, **ವಿಶ್ರುತಂ** = ಪ್ರಸಿದ್ಧವಾದ,

**ವಸ್ತು** = ಶ್ರೀಕೃಷ್ಣರೂಪವಾದ ವಸ್ತುವು,

**ಪ್ರಸ್ತುತಾಯ** = ಪ್ರಕೃತ ಕಾರ್ಯಕ್ಕೋಸ್ಕರ (ಹಿಂದೆ ಹೇಳಿದ ಸಂಪತ್ತಿನ ಪ್ರಾಪ್ತಿಗೋಸ್ಕರ ಅಥವಾ ನಿರ್ವಿಘ್ನಪರಿಸಮಾಪ್ತಿಗೋಸ್ಕರ)

**ಅಸ್ತು** = ಆಗಲಿ.

**ತಾತ್ಪರ್ಯ** — ಶ್ರೀಕೃಷ್ಣನೆಂಬ ವೇದಪ್ರತಿಪಾದ್ಯವಾದ ಮತ್ತು ವೇದಾರ್ಥ ನಿರ್ಣಾಯಕವಾದ ಬ್ರಹ್ಮ-ಮೀಮಾಂಸಾಶಾಸ್ತ್ರ ಪ್ರತಿಪಾದ್ಯವಾದ ಸರ್ವೋತ್ತಮವಾದ ಅಲೌಕಿಕ ವಸ್ತುವು, ದೇವತೆಗಳಿಂದ ನಿರಂತರ ಸ್ತುತಿಸಿಕೊಳ್ಳಲ್ಪಡುತ್ತದೆ. ಲಕ್ಷ್ಮೀದೇವಿಯೂ ಸ್ತುತಿಸುವ ಆ ಕೃಷ್ಣನನ್ನು ನಾನೂ ಸ್ತುತಿಸುತ್ತೇನೆ. ಒಂದು ಕೈಯಲ್ಲಿ ಕೆನೆ, ಬೆಣ್ಣೆಯನ್ನು ಹಿಡಿದಿರುವ (ಅಂಬೆಗಾಲೂರಿ ಮುಂದೆ ಬರುತ್ತಿರುವ) ಆ ಬಾಲಕೃಷ್ಣನನ್ನು ನಾನು ನಿರಂತರ ಪ್ರಾರ್ಥಿಸುತ್ತೇನೆ. ಶಬ್ದಾರ್ಥಸಂಪತ್ತು. ಲೌಕಿಕ ವೈದಿಕ ಸಂಪತ್ತು, ಗ್ರಂಥದ ನಿರ್ವಿಘ್ನ ಸಮಾಪ್ತಿಗಳನ್ನುಂಟುಮಾಡಿ ಆ ಶ್ರೀಕೃಷ್ಣನು ನನ್ನನ್ನು ಕಾಪಾಡಲಿ ಎಂದು ಗ್ರಂಥಕಾರರು ಪುನಃ ಮಂಗಳವನ್ನು ಮಾಡಿದ್ದಾರೆ.

**ವಿಶೇಷಾಂಶ** — 'ಶ್ರುತಿಮಸ್ತಕವಿಶ್ರುತಂ', 'ಮಯಾ ಸ್ತುತಂ' ಎಂಬ ಎರಡು ವಿಶೇಷಣಗಳಿಂದ ಈ ಶ್ಲೋಕವು ನರಸಿಂಹದೇವರ ಪರವಾಗಿಯೂ ಅರ್ಥವನ್ನು ಕೊಡುತ್ತದೆ. ಯದ್ಯಪಿ ಶ್ರೀಲಕ್ಷ್ಮೀನರಸಿಂಹನೂ, ಬಾಲಗೋಪಾಲ-ಕೃಷ್ಣನೂ ಒಬ್ಬನೇ, ಆದರೂ ಅವರಿಬ್ಬರನ್ನೂ ಒಂದೇ ಶ್ಲೋಕದಲ್ಲಿ ಚಮತ್ಕಾರವಾಗಿ ಸ್ತೋತ್ರ ಮಾಡುತ್ತಾರೆ. ಶ್ರುತಿಮಸ್ತಕ = ವೇದಾಂತ ಉಪನಿಷತ್ತುಗಳಲ್ಲಿ, ವಿಶ್ರುತಂ (ವಿಸ್ತೃತಂ) = ವಿಸ್ತಾರವಾಗಿ, ವರ್ಣಿಸಲ್ಪಟ್ಟ, ಮಯಾ = ಲಕ್ಷ್ಮೀದೇವಿಯಿಂದ (ಪ್ರಸನ್ನತೆಗೋಸ್ಕರ), ಸ್ತುತಂ = ಸ್ತೋತ್ರ ಮಾಡಲ್ಪಟ್ಟ, ವಸ್ತುವು ನರಸಿಂಹದೇವರು, ನೃಸಿಂಹ-ತಾಪನೀಯೋಪನಿಷತ್ತು, ಮಹಾನಾರಾಯಣೀಯೋಪನಿಷತ್ತು ಮೊದಲಾದವುಗಳಲ್ಲಿ ನರಸಿಂಹದೇವರ ಸ್ತೋತ್ರವು ವಿಶೇಷತಃ ಕಂಡುಬಂದಿದೆ 'ವಜ್ರನಖಾಯ ವಿದ್ಮಹೇ ತೀಕ್ಷ್ಣದಂಷ್ಟ್ರಾಯ ಧೀಮಹಿ । ತನ್ನೋ ನಾರಸಿಂಹಃ ಪ್ರಚೋ-ದಯಾತ್' ವಜ್ರದಂತಹ ಉಗುರುಳ್ಳ, ಹರಿತವಾದ ಕೋರೆಹಲ್ಲುಗಳುಳ್ಳ ನರಸಿಂಹನನ್ನು ನಾವು ಧ್ಯಾನಿಸುತ್ತೇವೆ. ಆ ನಾರಸಿಂಹನು, ನಮ್ಮ ಬುದ್ಧಿಗಳನ್ನು ಸತ್ಕಾರ್ಯಕ್ಕೆ ಪ್ರೇರಿಸಲಿ ಎಂದು ಮುಂತಾಗಿ ನರಸಿಂಹದೇವರ ಪ್ರಾರ್ಥನೆ-ಯಿದೆ. ಲಕ್ಷ್ಮೀದೇವಿಯೂ ನರಸಿಂಹದೇವರನ್ನು ಸ್ತೋತ್ರ ಮಾಡಿದಳೆಂದು ಕಂಡುಬರುತ್ತದೆ. ಆದ್ದರಿಂದ ಇದು ನರಸಿಂಹದೇವರ ಸ್ತುತಿಯೂ ಆಗುತ್ತದೆ.

**ವಿಗ್ರಹ — ಸುರಸ್ತೋಮೈಃ** — ಸುರಾಣಾಂ ಸ್ತೋಮಾಃ ಸುರಸ್ತೋಮಾಃ, ತೈಃ ಸುರಸ್ತೋಮೈಃ ।

**ಶ್ರುತಿಮಸ್ತಕವಿಶ್ರುತಂ** — ಮಸ್ತು ಹಸ್ತೇ ಯಸ್ಯ ತತ್ ಮಸ್ತುಹಸ್ತಂ । ಶ್ರುತೀನಾಂ ಮಸ್ತಕಾನಿ (ಮಸ್ತಕಾಃ) = ಶ್ರುತಿಮಸ್ತಕಾನಿ, ಶ್ರುತಿಮಸ್ತಕೇಷು ವಿಶ್ರುತಂ ಶ್ರುತಿಮಸ್ತಕವಿಶ್ರುತಂ ।

**ಕ್ರಿಯಾಪದ** — ಅಸ್ತು ಸ್ತಾತ್, ಸ್ತಾಂ , ಸಂತು । ಏಧಿ ಸ್ತಾತ್, ಸ್ತಂ, ಸ್ತ । ಅಸಾನಿ, ಅಸಾವ, ಅಸಾಮ । ಅಸ ಭುವಿ ಇತಿ ಸತ್ತಾರ್ಥಕಾತ್, ಅಸ್ ಧಾತೋಃ, ಅಕರ್ಮಕಾತ್, ಕರ್ತರಿ ಪರಸ್ಮೈಪದಿನಃ, ಪ್ರಾರ್ಥನಾಯಾಂ, ಲೋಟ್, ಪ್ರಥಮಪುರುಷೇ ಏಕವಚನೇ 'ಅಸ್ತು' ಇತಿ ರೂಪಮ್ ।

**ಪ್ರಯೋಗ**— ವಸ್ತು ಪ್ರಸ್ತುತಾಯ ಅಸ್ತು । (ಕರ್ತರಿ)

ವಸ್ತುನಾ ಪ್ರಸ್ತುತಾಯ ಭೂಯತಾಮ್ । (ಭಾವೇ)

**ಅಲಂಕಾರ** — ಈ ಪದ್ಯದಲ್ಲಿ ಸ್ತು, ಸ್ತು, ಸ್ತು , ಸ್ತು, ಸ್ತು, ಸ್ತು ಎಂದು ಆರು ಬಾರಿ ಸ್ವರಸಹಿತ ವ್ಯಂಜನಗಳು ಒಂದೇ ರೀತಿ ಆವೃತ್ತಿ ಹೊಂದಿವೆ. ಆದುದರಿಂದ ಇಲ್ಲಿ ವೃತ್ತ್ಯನುಪ್ರಾಸವೆಂಬ ಶಬ್ದಾಲಂಕಾರವಿದೆ.

ವೃತ್ತ್ಯನುಪ್ರಾಸ ಏಕಸ್ಯಾಪ್ಯಾವೃತ್ತಿರಸಕೃದ್ಯದಿ ।

ವಿಜಯೀಂದ್ರೋ ವಿಲೋಲಾಕ್ಷೀ ವೀಕ್ಷಣಾಕ್ಷತಹೃತ್ ಕ್ಷಿತೌ ॥

ಸ್ವರವಿಲ್ಲದೆ ವ್ಯಂಜನಗಳ ಆವೃತ್ತಿಯಾದರೂ ವೃತ್ತ್ಯನುಪ್ರಾಸಾಲಂಕಾರವಿದೆ. ಲೋ, ಲಾ, ಕ್ಷೀ, ಕ್ಷ , ಕ್ಷ , ಕ್ಷಿ , ಎಂದು ವರ್ಣಗಳ ಆವೃತ್ತಿಯಿರುವುದರಿಂದ ಈ ಉದಾಹರಣೆಯಲ್ಲಿಯೂ ವೃತ್ತ್ಯನುಪ್ರಾಸಾಲಂಕಾರವಿದೆ. ಕ್ಷಿತೌ = ಭೂಮಿಯಲ್ಲಿ, ವಿಲೋಲಾಕ್ಷೀ = ಚಂಚಲಾಕ್ಷಿಯರಾದ ಸುಂದರ ನಾರಿಯರ, ವೀಕ್ಷಣ = ಕಡೆಗಣ್ಣಿನ ನೋಟದಿಂದ, ಅಕ್ಷತ = ಗಾಯ ಹೊಂದದಿರುವ (ಅಪಹರಿಸಲ್ಪಡದಿರುವ), ಹೃತ್ = ಮನಸ್ಸುಳ್ಳವರು , ವಿಜಯೀಂದ್ರಃ = ಶ್ರೀವಿಜಯೀಂದ್ರತೀರ್ಥ ಗುರುಸಾರ್ವಭೌಮರು (ಏಕ ಏವ) = ಒಬ್ಬರೇ ಎಂದು ಉದಾಹರಣ ಶ್ಲೋಕದ ಅರ್ಥ.



**ಅವತಾರಿಕಾ** — ಈಗ ಕವಿಗಳು ಕಾವ್ಯರಚನೆಗೆ ಉಪಯುಕ್ತವಾದ ಒಳ್ಳೆಯ ಶಬ್ದ ಮತ್ತು ಅರ್ಥಗಳ ಸ್ಫುರಣೆಗೋಸ್ಕರ ಜ್ಞಾನಪ್ರದರಾದ ಆದಿಗುರುಗಳಾದ ಶ್ರೀಮದಾನಂದತೀರ್ಥಭಗವತ್ಪಾದರನ್ನು ಚಂದ್ರನಿಗೆ ಹೋಲಿಸಿ ಸ್ತೋತ್ರ ಮಾಡುತ್ತಾ ತಮ್ಮ ಇಷ್ಟಾರ್ಥ ಸಿದ್ಧಿಯನ್ನು ಹಾರೈಸುತ್ತಾರೆ.

**ಶ್ರೀಮದಾನಂದತೀರ್ಥೇಂದುಭಾಸನಂ ಮಮ ಮಾನಸೇ ।**

**ಆಶಾಸೇ ಸಾಧುಶಬ್ದಾರ್ಥಸರಿದೀಶಾಭಿವೃದ್ಧಯೇ ॥ 3 ॥**

**ಪದಚ್ಛೇದ** — ಶ್ರೀಮದಾನಂದತೀರ್ಥೇಂದುಭಾಸನಂ, ಮಮ, ಮಾನಸೇ, ಆಶಾಸೇ, ಸಾಧುಶಬ್ದಾರ್ಥ-ಸರಿದೀಶಾಭಿವೃದ್ಧಯೇ ।

**ಅನ್ವಯ**— (ಅಹಂ) ಸಾಧುಶಬ್ದಾರ್ಥಸರಿದೀಶಾಭಿವೃದ್ಧಯೇ ಮಮ ಮಾನಸೇ ಶ್ರೀಮದಾನಂದತೀರ್ಥೇಂ-ದುಭಾಸನಂ ಆಶಾಸೇ ।

**ಅನ್ವಯಾರ್ಥ** —

(**ಅಹಂ** = ನಾನು)

**ಸಾಧುಶಬ್ದಾರ್ಥಸರಿದೀಶಾಭಿವೃದ್ಧಯೇ** — **ಸಾಧು** = ವ್ಯಾಕರಣ ಸುಸಂಸ್ಕೃತವಾದ ಅನುಪ್ರಾಸಾದಿ ಶಬ್ದಾಲಂಕಾರಗಳಿಂದ ಕೂಡಿರುವ, (ಸಾಧು = ಅಲಂಕಾರಾದಿ ಸಹಿತವಾದ) **ಶಬ್ದ** = ಶಬ್ದಗಳೂ, **ಅರ್ಥ** = ಅರ್ಥಗಳೂ, ಇವುಗಳೆಂಬ, **ಸರಿದೀಶ** = ಸಮುದ್ರದ, **ಅಭಿವೃದ್ಧಯೇ** = ತುಂಬಿ ಉಕ್ಕುವುದಕ್ಕಾಗಿ

**ಮಮ** = ನನ್ನ ,

**ಮಾನಸೇ** = ಮನಸ್ಸಿನಲ್ಲಿ

**ಶ್ರೀಮದಾನಂದತೀರ್ಥೇಂದುಭಾಸನಂ** — **ಶ್ರೀಮತ್** = ಪೂರ್ಣಜ್ಞಾನಾದಿಸಂಪದ್ಯುಕ್ತರಾದ, **ಆನಂದತೀರ್ಥ** = ಶ್ರೀಮಧ್ವಾಚಾರ್ಯರೆಂಬ (**ಶ್ರೀಮತ್** = ಷೋಡಶಕಲಾ ಪರಿಪೂರ್ಣನಾದ), **ಇಂದು** = ಚಂದ್ರನ, **ಭಾಸನಂ** = ಸ್ಮರಣೆಯನ್ನು (ಉದಯವನ್ನು) (ಪ್ರತಿಫಲಿಸುವಿಕೆಯನ್ನು )

**ಆಶಾಸೇ** = ಹಾರೈಸುತ್ತೇನೆ.

**ತಾತ್ಪರ್ಯ** — ಪೂರ್ಣಚಂದ್ರನು ಉದಯಿಸಿದಾಗ ಸಮುದ್ರವು ತುಂಬಿ ಉಕ್ಕುತ್ತದೆ. ಹಾಗೆಯೇ ಪೂರ್ಣಜ್ಞಾನಾದಿ ಸಂಪದ್ಯುಕ್ತರಾದ ಆಚಾರ್ಯರ ಸ್ಮರಣೆಯಿಂದ ನನ್ನ ಮನಸ್ಸಿನಲ್ಲಿ, ಕಾವ್ಯ ನಿರ್ಮಾಣಕ್ಕೆ ಉಪಯುಕ್ತವಾದ, ಸುಸಂಸ್ಕೃತವಾದ ಮತ್ತು ಶಬ್ದಾಲಂಕಾರಪೂರ್ಣವಾದ ಒಳ್ಳೆಯ ಶಬ್ದಗಳೂ, ಅರ್ಥಾಲಂಕಾರಾದಿ ಪರಿಪೂರ್ಣವಾದ ಅರ್ಥಗಳೂ ಸಮುದ್ರದಂತೆ ಉಕ್ಕಿ ಬರಲಿ ಬೇಗನೆ ಒಳ್ಳೆಯ ಶಬ್ದ ಮತ್ತು ಅರ್ಥಗಳು ನನ್ನ ಮನಸ್ಸಿನಲ್ಲಿ ಸ್ಫುರಿಸಲಿ.

**ವಿಗ್ರಹ** —

**ಶ್ರೀಮದಾನಂದತೀರ್ಥೇಂದುಭಾಸನಂ** — ಶ್ರೀಃ ಅಸ್ಯಾಸ್ತೀತಿ ಶ್ರೀಮಾನ್, ಆನಂದಕರಂ ತೀರ್ಥಂ ಯಸ್ಮಾತ್ ಸಃ = ಆನಂದತೀರ್ಥಃ, ಶ್ರೀಮಾಂಶ್ಚಾಸೌ ಆನಂದತೀರ್ಥಶ್ಚ = ಶ್ರೀಮದಾನಂದತೀರ್ಥಃ, ಶ್ರೀಮದಾನಂದತೀರ್ಥ ಏವ ಇಂದುಃ = ಶ್ರೀಮದಾನಂದತೀರ್ಥೇಂದುಃ, ಶ್ರೀಮದಾನಂದತೀರ್ಥೇಂದೋಃ ಭಾಸನಂ = ಶ್ರೀಮದಾನಂದತೀರ್ಥೇಂದುಭಾಸನಂ, ತತ್ ।

**ಸಾಧುಶಬ್ದಾರ್ಥಸರಿದೀಶಾಭಿವೃದ್ಧಯೇ** — ಶಬ್ದಾಶ್ಚ ಅರ್ಥಾಶ್ಚ = ಶಬ್ದಾರ್ಥಾಃ, ಸಾಧವಶ್ಚ ತೇ ಶಬ್ದಾರ್ಥಶ್ಚ = ಸಾಧುಶಬ್ದಾರ್ಥಾಃ, ಸರಿತಾಂ ಈಶಃ = ಸರಿದೀಶಃ, ಸಾಧುಶಬ್ದಾರ್ಥಾ ಏವ ಸರಿದೀಶಃ, = ಸಾಧುಶಬ್ದಾರ್ಥಸರಿದೀಶಃ, ತಸ್ಯ ಅಭಿವೃದ್ಧಿಃ = ಸಾಧುಶಬ್ದಾರ್ಥಸರಿದೀಶಾಭಿವೃದ್ಧಿಃ, ತಸ್ಯೈ.

**ಕ್ರಿಯಾಪದ** — ಆಶಾಸ್ತೇ, ಆಶಾಸಾತೇ, ಆಶಾಸತೇ। ಆಶಾಸ್ಸೇ, ಆಶಾಸಾಥೇ, ಆಶಾಧ್ವೇ। ಆಶಾಸೇ, ಆಶಾಸ್ವಹೇ, ಆಶಾಸ್ಮಹೇ ॥ ಆಙ್ ಉಪಸರ್ಗಪೂರ್ವಕಾತ್ 'ಆಙಃ ಶಾಸು ಇಚ್ಛಾಯಾಂ' ಇತ್ಯಸ್ಮಾತ್ ಇಚ್ಛಾರ್ಥಕಾತ್ ನಿತ್ಯಂ, ಆಙ್‌ಪೂರ್ವಕಾತ್, ಶಾಸ್‌ಧಾತೋಃ, ಸಕರ್ಮಕಾತ್, ಸೇಟ್ ಆತ್ಮನೇಪದಿನಃ, ಉತ್ತಮಪುರುಷೈಕವಚನೇ ಆಶಾಸೇ ಇತಿ ರೂಪಮ್ ।

**ಪ್ರಯೋಗ** — ಅಹಂ ಶ್ರೀಮದಾನಂದತೀರ್ಥೇಂದುಭಾಸನಂ ಆಶಾಸೇ । (ಕರ್ತರಿ)

ಮಯಾ ಶ್ರೀಮದಾನಂದತೀರ್ಥೇಂದುಭಾಸನಂ ಆಶಾಸ್ಯತೇ । (ಕರ್ಮಣಿ)

**ಅಲಂಕಾರ ಮತ್ತು ವಿಶೇಷಾಂಶಗಳು** — ಇಲ್ಲಿ ಶ್ರೀಮದಾನಂದತೀರ್ಥರನ್ನು ಚಂದ್ರನೆಂದು ಹೇಳಿರುವುದರಿಂದ ಸಮಾಭೇದ ರೂಪಕಾಲಂಕಾರವಿದೆ.

ರೂಪಕಂ ತದ್ವಿಷಯಿಣಾ ಭೇದತಾದ್ರೂಪ್ಯಯೋಃ ಕ್ರಮಾತ್ ।
ವಿಷಯೇ ರಂಜನೇ ಷೋಡಶಾಧಿಕನ್ಯೂನಸಮತ್ವತಃ ॥
ಚಂದ್ರೋ ಜಯೀಂದ್ರೋ ನಿತ್ಯರ್ಧಿರಸೌ ಭೂಗತಿರುತ್ಕಲಃ ॥ (ಅಲಂಕಾರಮಂಜರೀ)

ಇಲ್ಲಿ ಮನಸ್ಸು ಸಮುದ್ರ(ಸಮಾನ)ವೆಂದು ವ್ಯಂಗ್ಯವಾಗಿ ತೋರುತ್ತದೆ.

**ಅವತಾರಿಕಾ** — ಕವಿಗಳು ಈಗ ತಾವು ರಚಿಸಲು ಬಯಸಿರುವ ಮಹಾಕಾವ್ಯಕ್ಕೆ ಬೇಕಾಗಿರುವ ಅರ್ಥವತ್ತಾದ ಶಬ್ದದ ಸ್ಫೂರ್ತಿಗೋಸ್ಕರ, ಸರ್ವಶಬ್ದಾಭಿಮಾನಿನಿಯಾದ, ಇಲ್ಲಿ ಪ್ರತಿಪಾದ್ಯರಾದ ಗುರುಗಳಲ್ಲಿ ಅನುಗ್ರಹ ಮಾಡು-ತ್ತಿರುವ ಶ್ರೀಭಾರತೀದೇವಿಯು ಒಳ್ಳೆಯ ಶಬ್ದಗಳ ಸ್ಮರಣೆಯನ್ನುಂಟು ಮಾಡಿಕೊಟ್ಟು ನನಗೆ ರಕ್ಷಕಳಾಗಲಿ ಎಂದು ಪ್ರಾರ್ಥಿಸುತ್ತಾರೆ —

**ಶ್ರೀರಾಘವೇಂದ್ರರತ್ನಾನಾಂ ರಸನಾರಂಗನರ್ತಕೀ ।**
**ಶಬ್ದಾಂಬುಧಿಶರಜ್ಜ್ಯೋತ್ಸ್ನಾ ಶರಣಂ ಮಮ ಶಾರದಾ ।। 4 ।।**

**ಪದಚ್ಛೇದ** — ಶ್ರೀರಾಘವೇಂದ್ರರತ್ನಾನಾಂ, ರಸನಾರಂಗನರ್ತಕೀ, ಶಬ್ದಾಂಬುಧಿಶರಜ್ಜ್ಯೋತ್ಸ್ನಾ, ಶರಣಂ, ಮಮ, ಶಾರದಾ ।

**ಅನ್ವಯ** — ಶ್ರೀರಾಘವೇಂದ್ರರತ್ನಾನಾಂ ರಸನಾರಂಗನರ್ತಕೀ ಶಬ್ದಾಂಬುಧಿಶರಜ್ಜ್ಯೋತ್ಸ್ನಾ ಶಾರದಾ ಮಮ ಶರಣಂ (ಭವತು) ।

**ಅನ್ವಯಾರ್ಥ** —

**ಶ್ರೀರಾಘವೇಂದ್ರರತ್ನಾನಾಂ** — **ಶ್ರೀ** = ಕಾಂತಿಯುಕ್ತರಾದ, **ರಾಘವೇಂದ್ರರತ್ನಾನಾಂ** = ಶ್ರೇಷ್ಠರಾದ ಶ್ರೀರಾಘವೇಂದ್ರತೀರ್ಥರ,

**ರಸನಾರಂಗನರ್ತಕೀ** — **ರಸನಾ** = ನಾಲಿಗೆಯೆಂಬ, **ರಂಗ** = ನಾಟ್ಯಸ್ಥಳದಲ್ಲಿ, **ನರ್ತಕೀ** = ಕುಣಿಯುವ,

**ಶಬ್ದಾಂಬುಧಿಶರಜ್ಜ್ಯೋತ್ಸ್ನಾ** — **ಶಬ್ದಾಂಬುಧಿ** = ಶಬ್ದಗಳೆಂಬ ಸಮುದ್ರಕ್ಕೆ, **ಶರತ್** = ಶರತ್ಕಾಲದ, **ಜ್ಯೋತ್ಸ್ನಾ** = ಬೆಳದಿಂಗಳಾದ

**ಶಾರದಾ** = ಸರಸ್ವತೀದೇವಿಯು (ಭಾರತೀಯು),

**ಮಮ** = ನನಗೆ,

**ಶರಣಂ** = ರಕ್ಷಕಳಾಗಿ, (ಭವತು = ಆಗಲಿ)

**ತಾತ್ಪರ್ಯ** — ಶ್ರೇಷ್ಠರಾದ ಶ್ರೀರಾಘವೇಂದ್ರತೀರ್ಥರ ನಾಲಿಗೆಯು ಸರಸ್ವತೀದೇವಿಯು (ಭಾರತೀ-ದೇವಿಯ) ನಾಟ್ಯವಾಡುವ ರಂಗಸ್ಥಳದಂತಿದೆ. ಅವರು ಮಾಡುವ ಪ್ರವಚನ ಮತ್ತು ಟೀಕಾ ಟಿಪ್ಪಣ್ಯಾದಿಗಳ ವ್ಯಾಜದಿಂದ ಭಾರತಿಯು ಅಲ್ಲಿ ಒಳ್ಳೆಯ ಶಬ್ದಸಂಪತ್ತಿನಿಂದ ವಿಹರಿಸುತ್ತಾಳೆ. ಶರತ್ಕಾಲದ ಬೆಳದಿಂಗಳು ಸಮುದ್ರ-ವನ್ನು ಉಕ್ಕೇರಿಸುವಂತೆ ಸರಸ್ವತೀದೇವಿಯೂ (ಭಾರತೀದೇವಿಯೂ) ಅಲೆ ಅಲೆಯಾಗಿ ಒಳ್ಳೆಯ ಶಬ್ದಗಳ ಸ್ಫೂರ್ತಿಯನ್ನು ನನಗೆ ಕೊಡಲಿ.

**ವಿಗ್ರಹ** —

**ಶ್ರೀರಾಘವೇಂದ್ರರತ್ನಾನಾಂ** — ಶ್ರೀಯುಕ್ತಶ್ಚಾಸೌ ರಾಘವೇಂದ್ರಶ್ಚ ಶ್ರೀರಾಘವೇಂದ್ರಃ, ಶ್ರೀರಾಘ-ವೇಂದ್ರಾಃ ಏವ ರತ್ನಾನಿ ಶ್ರೀರಾಘವೇಂದ್ರರತ್ನಾನಿ, ತೇಷಾಂ ।

**ರಸನಾಂಗನರ್ತಕೀ** — ರಸನಾ ಏವ ರಂಗಃ ರಸನಾರಂಗಃ, ನೃತ್ಯತೀತಿ ನರ್ತಕೀ, ರಸನಾರಂಗೇ ನರ್ತಕೀ ರಸನಾರಂಗನರ್ತಕೀ ।

**ಶಬ್ದಾಂಬುಧಿಶರಜ್ಜ್ಯೋತ್ಸ್ನಾ—** ಅಂಬೂನಿ ಧೀಯಂತೇ ಅಸ್ಮಿನ್ ಇತ್ಯಂಬುಧಿಃ, ಶಬ್ದ ಏವ ಅಂಬುಧಿಃ ಶಬ್ದಾಂಬುಧಿಃ, ಶರದಿ ಜ್ಯೋತ್ಸ್ನಾ ಶರಜ್ಜ್ಯೋತ್ಸ್ನಾ, ಶಬ್ದಾಂಬುಧೇಃ ಶರಜ್ಜ್ಯೋತ್ಸ್ನಾ, ಶಬ್ದಾಂ-ಬುಧಿಶರಜ್ಜ್ಯೋತ್ಸ್ನಾ ।

**ಅಲಂಕಾರ —** ಇಲ್ಲಿ 'ರಸನಾರಂಗನರ್ತಕೀ', ಶಬ್ದಾಂಬುಧಿಶರಜ್ಜ್ಯೋತ್ಸ್ನಾ ಎಂಬಲ್ಲಿ ರೂಪಕಾಲಂಕಾರವಿದೆ. ರಸನಾ ಎಂದರೆ ನಾಲಿಗೆ, ಅದಕ್ಕೂ ರಂಗಸ್ಥಳಕ್ಕೂ ನರ್ತಕಿಗೂ, ಶಾರದೆಗೂ ಶಬ್ದಕ್ಕೂ , ಸಮುದ್ರಕ್ಕೂ ಅಭೇದವನ್ನು ವರ್ಣಿಸಿರುವುದರಿಂದ ಅಭೇದರೂಪಕಾಲಂಕಾರ.

**ವಿಶೇಷ —** ಇಲ್ಲಿ ಗುರುಗುಣಸ್ತವನದಲ್ಲಿ ಶ್ರೀವಾದೀಂದ್ರತೀರ್ಥರು ಗುರುಗಳು ರಚಿಸಿರುವ ಪರಿಮಳ ಗ್ರಂಥವನ್ನು ವರ್ಣಿಸುವಾಗ 'ಧೀರಶ್ರೀರಾಘವೇಂದ್ರ ತ್ವದತುಲರಸನಾರಂಗನೃತ್ಯತ್ಸ್ವಯಂಭೂಯೋಷಾಧಮ್ಮಿಲ್ಲ-ಭಾರಶ್ಲಥಕುಸುಮತತೀಸ್ತ್ವದ್ಗಿರಃ ಸಂಗಿರಾಮಃ' ಎಂದು ಹೇಳಿರುವ ವಿಷಯವು ಸ್ಮರಣೆಗೆ ಬರುತ್ತಿದೆ.



**ಅವತಾರಿಕಾ —** ಕವಿವರ್ಯರಾದ ನಾರಾಯಣಾಚಾರ್ಯರು ಕವಿಕುಲತಿಲಕರಾದ, ಉಷಾಹರಣ, ಹರಿವಾಯುಸ್ತುತಿ, ವಿಷ್ಣುಸ್ತುತಿ, ತತ್ತ್ವಪ್ರದೀಪ ಮುಂತಾದ ಕೃತಿಗಳ ಕರ್ತೃಗಳಾದ ಶ್ರೀತ್ರಿವಿಕ್ರಮಪಂಡಿತಾಚಾರ್ಯರ ಅನುಗ್ರಹವು ತನ್ನ ಕಾವ್ಯರಚನೆಗೆ ಆವಶ್ಯಕವೆಂಬ ಅಭಿಪ್ರಾಯದಿಂದ ಪಂಡಿತಾರ್ಯರ ಕವಿತಾಸರಸ್ವತಿಯನ್ನು ಹೊಗಳುತ್ತಾ, ಅವರ ಅನುಗ್ರಹವನ್ನು ಹಾರೈಸುತ್ತಾರೆ—

**ಕಠಿನಾಽಪಿ ಕವಿಶ್ಲಾಘ್ಯಾ ತ್ರೈವಿಕ್ರಮಸರಸ್ವತೀ ।**
**ಸುವರ್ಣಯೋಗಸಂದೃಶ್ಯಾ ವರಾ ವಜ್ರಮಣಿರ್ಯಥಾ ॥ 5 ॥**

**ಪದಚ್ಛೇದ —** ಕಠಿನಾ, ಅಪಿ, ಕವಿಶ್ಲಾಘ್ಯಾ, ತ್ರಿವಿಕ್ರಮಸರಸ್ವತೀ, ಸುವರ್ಣಯೋಗಸಂದೃಶ್ಯಾ, ವರಾ, ವಜ್ರಮಣಿಃ, ಯಥಾ ।

**ಅನ್ವಯ —** (ಕಠಿನಾ ಅಪಿ) ಸುವರ್ಣಯೋಗಸಂದೃಶ್ಯಾ, ವರಾ, (ಕವಿಶ್ಲಾಘ್ಯಾ) ವಜ್ರಮಣಿಃ, ಯಥಾ, ಕಠಿನಾ ಅಪಿ (ಸುವರ್ಣಯೋಗಸಂದೃಶ್ಯಾ ವರಾ ತ್ರೈವಿಕ್ರಮಸರಸ್ವತೀ ಕವಿಶ್ಲಾಘ್ಯಾ ಅಸ್ತಿ) ।

**ಅನ್ವಯಾರ್ಥ —**

**ಕಠಿನಾ ಅಪಿ** = (ಗಟ್ಟಿಯಾಗಿದ್ದರೂ),
**ಸುವರ್ಣಯೋಗಸಂದೃಶ್ಯಾ — ಸುರ್ವಣ** = ಭಂಗಾರದ, **ಯೋಗ** = ಸಂಬಂಧದಿಂದ, **ಸಂದೃಶ್ಯಾ** = ಮನೋಹರವಾದ (ನೋಡಲು ಯೋಗ್ಯವಾದ)
**ವರಾ** = ಶ್ರೇಷ್ಠವಾದ,
**ಕವಿಶ್ಲಾಘ್ಯಾ** = ಪರೀಕ್ಷಕರಿಂದ ಪ್ರಶಂಸನೀಯವಾದ
**ವಜ್ರಮಣಿಃ ಯಥಾ** = ವಜ್ರಮಣಿಯಂತೆ,
**ಕಠಿನಾ ಅಪಿ** = ಅರ್ಥಜ್ಞಾನಕ್ಕೆ ಸುಲಭವಲ್ಲದಿದ್ದರೂ,
**ಸುವರ್ಣಯೋಗಸಂದೃಶ್ಯಾ — ಸುವರ್ಣ** = ಅನುಪ್ರಾಸಾದಿ ಶಬ್ದಾಲಂಕಾರಗಳು, ಉಪಮಾದಿ ಅರ್ಥಾಲಂಕಾರಗಳು ಇವುಗಳ, **ಯೋಗ** = ಸಂಬಂಧದಿಂದ, **ಸಂದೃಶ್ಯಾ** = ಮನೋಹರವಾದ,

**ವರಾ** = ಶ್ರೇಷ್ಠವಾದ,
**ತ್ರೈವಿಕ್ರಮಸರಸ್ವತೀ** = ತ್ರಿವಿಕ್ರಮ ಪಂಡಿತಾಚಾರ್ಯರ ಮಾತು,
**ಕವಿಶ್ಲಾಘ್ಯಾ** = ಕವಿಗಳಿಂದ ಪ್ರಶಂಸನೀಯವಾಗಿ
(**ಅಸ್ತಿ** = ಇದೆ).

**ತಾತ್ಪರ್ಯ** = ವಜ್ರಮಣಿ ಬಹಳ ಕಠಿನ. ಅದನ್ನು ಪ್ರತ್ಯೇಕವಾಗಿ ಇಟ್ಟಾಗ ಅದರ ಶೋಭೆ ಗೊತ್ತಾಗುವುದಿಲ್ಲ. ಬಹಳ ಬೆಲೆ ಬಾಳುವ ಆ ವಜ್ರಮಣಿಯನ್ನು ಭಂಗಾರದ ಕುಂದಣದೊಡನೆ ಸೇರಿಸಿ ಆಭರಣದ ರೂಪದಲ್ಲಿ ದೇವರನ್ನು ಅಲಂಕರಿಸಲು ಉಪಯೋಗಿಸಿದಾಗ ರತ್ನಪರೀಕ್ಷಕರು ಅದನ್ನು ಹೊಗಳುತ್ತಾರೆ. ಅದರ ಬೆಲೆಯು ಆಗ ಎಲ್ಲರಿಗೂ ವ್ಯಕ್ತವಾದ ಕಾಂತಿಯಿಂದ ತಿಳಿದುಬರುತ್ತದೆ. ಅದರಂತೆ ತ್ರಿವಿಕ್ರಮ ಪಂಡಿತಾಚಾರ್ಯರ ಮಾತು ಅರ್ಥಜ್ಞಾನಕ್ಕೆ ಅಷ್ಟೊಂದು ಸುಲಭವಲ್ಲ. ಅತಿಕಠಿಣ, ಅತಿ ಗಹನ, ಆದರೂ ಶ್ರೇಷ್ಠವಾದ ಅವರ ವಾಣಿಯು ಅನುಪ್ರಾಸಾದಿ ಅಲಂಕಾರಗಳಿಂದ ಕೂಡಿ ಉತ್ತಮ ಶೈಲಿಯಲ್ಲಿ ಇರುವುದರಿಂದ ಮನೋಹರವಾಗಿ ಶಾಸ್ತ್ರಜ್ಞರಾದ ಕವಿಗಳ ಪ್ರಶಂಸೆಗೂ ಪಾತ್ರವಾಗುತ್ತದೆ. ಇಂತಹ ಶ್ರೀತ್ರಿವಿಕ್ರಮಪಂಡಿತಾಚಾರ್ಯರ ವಾಣಿಯು ನನ್ನ ಕವಿತಾರಚನೆಗೆ ಸಹಾಯಕವಾಗಲಿ ಎಂಬ ಅಭಿಪ್ರಾಯವನ್ನು ಇಲ್ಲಿ ಸೂಚಿಸುತ್ತಿದ್ದಾರೆ. (ಇಲ್ಲಿ ಸುವರ್ಣ ಎಂಬ ಪದಕ್ಕೆ ಭಂಗಾರ ಮತ್ತು ಸು = ಒಳ್ಳೆಯ ವರ್ಣ = ಅಕ್ಷರಗಳು ಎಂದು ಎರಡು ಅರ್ಥಗಳು. ಒಂದೇ ಶಬ್ದಕ್ಕೆ ಎರಡು ಅರ್ಥಗಳಿದ್ದರೆ ಅದನ್ನು ಶ್ಲೇಷವೆಂದು ಹೇಳುತ್ತಾರೆ. ಹೀಗೆ ಶ್ಲೇಷದಿಂದ ಸುವರ್ಣಯೋಗಸಂದೃಶ್ಯಾ ಎಂಬ ವಿಶೇಷಣವನ್ನು ವಜ್ರ-ಮಣಿಗೂ, ತ್ರಿವಿಕ್ರಮ ಪಂಡಿತಾಚಾರ್ಯರ ವಾಣಿಗೂ ಅನ್ವಯಿಸುವಂತೆ ಕವಿಗಳು ಪ್ರಯೋಗಿಸಿರುತ್ತಾರೆ).

**ವಿಗ್ರಹ** —

**ಕವಿಶ್ಲಾಘ್ಯಾ** — ಶ್ಲಾಘಿತುಂ ಯೋಗ್ಯಾ ಶ್ಲಾಘ್ಯಾ, ಕವಿಭಿಃ ಶ್ಲಾಘ್ಯಾ ಕವಿಶ್ಲಾಘ್ಯಾ ।

**ತ್ರೈವಿಕ್ರಮಸರಸ್ವತೀ** — ತ್ರಿವಿಕ್ರಮಸ್ಯ ಇಯಂ = ತ್ರೈವಿಕ್ರಮೀ(ಮಾ), ತ್ರೈವಿಕ್ರಮೀ ಚ (ಮಾ) ಸಾ ಸರಸ್ವತೀ ಚ = ತ್ರೈವಿಕ್ರಮಸರಸ್ವತೀ, (ಇಲ್ಲಿ ಸಮಾಸದಲ್ಲಿ ವಿಗ್ರಹದಲ್ಲಿರುವ ತ್ರೈವಿಕ್ರಮೀ ಎಂಬ ಸ್ತ್ರೀಲಿಂಗಶಬ್ದಕ್ಕೆ 'ಸ್ತ್ರಿಯಾಃ ಪುಂವದ್ಭಾಷಿತ ಪುಂಸ್ಕಾದನೂಙ್ ಸಮಾನಾಧಿಕರಣೇ ಸ್ತ್ರಿಯಾ-ಮಪೂರಣೀಪ್ರಿಯಾದಿಷು' ಎಂಬ ಸೂತ್ರದಿಂದ ಪುಂವದ್ಭಾವ (ಪುಲ್ಲಿಂಗದ ರೂಪ ಬಂದಿದೆ) (ಅಥವಾ ತ್ರಿವಿಕ್ರಮಸ್ಯ ಸರಸ್ವತೀ ತ್ರಿವಿಕ್ರಮಸರಸ್ವತೀ ಷಷ್ಠೀತತ್ಪುರುಷ) ।

**ಸುವರ್ಣಯೋಗಸಂದೃಶ್ಯಾ** — ಸುವರ್ಣಸ್ಯ ಯೋಗಃ = ಸುವರ್ಣಯೋಗಃ (ಶೋಭನಾನಿ ಚ ತಾನಿ ವರ್ಣಾನಿ ಚ ಸುವರ್ಣಾನಿ, ಸುವರ್ಣಾನಾಂ ಯೋಗಃ ಸುವರ್ಣಯೋಗಃ) ಸಮ್ಯಗ್ ದ್ರಷ್ಟುಂ ಯೋಗ್ಯಾ = ಸಂದೃಶ್ಯಾ, ಸುವರ್ಣಯೋಗೇನ ಸಂದೃಶ್ಯಾ ಸುವರ್ಣಯೋಗಸಂದೃಶ್ಯಾ ।

**ವಜ್ರಮಣಿಃ** — ವಜ್ರಂ ಇತಿ ಮಣಿಃ ವಜ್ರಮಣಿಃ ।

**ಕೋಶ** — ವಜ್ರೋಽಸ್ತ್ರೀ ಹೀರಕೇಪವೌ, ವರ್ಣೋ ದ್ವಿಜಾದೌ ಶುಕ್ಲಾದೌ ಸ್ತುತೌ ವರ್ಣಂ ತು ವಾಕ್ಷರೇ । ರತ್ನಂ ಮಣಿಃ ದ್ವಯೋಃ ಅಶ್ಮಜಾತೌ ಮುಕ್ತಾದಿಕೇಽಪಿ ಚ ॥ ಇದರಂತೆ ಮಣಿಶಬ್ದವು ಸ್ತ್ರೀಲಿಂಗದಲ್ಲಿಯೂ ಇದೆ.

**ಅಲಂಕಾರ** — ಇಲ್ಲಿ ತ್ರಿವಿಕ್ರಮಪಂಡಿತಾಚಾರ್ಯರ ಮಾತನ್ನು ವಜ್ರಮಣಿಗೆ ಹೋಲಿಸಿದ್ದಾರೆ. ತ್ರೈವಿಕ್ರಮ-ಸರಸ್ವತಿ ಉಪಮೇಯ ವಜ್ರಮಣಿ ಉಪಮಾನ, ಕಾಠಿನ್ಯ, ಸುವರ್ಣಯೋಗದಿಂದ ಸಂದರ್ಶನೀಯತೆ, ಕವಿಶ್ಲಾಘ್ಯತೆ, ನಿರ್ದೋಷತ್ವ ಮುಂತಾದ ಶ್ರೇಷ್ಠತೆ ಇವುಗಳು ಉಪಮಾನೋಪಮೇಯ ಎರಡರಲ್ಲಿಯೂ ಬರುವ ಸಾಧಾರಣ ಧರ್ಮಗಳು, ಯಥಾ ಎಂಬುದು ಉಪಮಾವಾಚಕಪದ ಹೀಗೆ ಉಪಮಾನ, ಉಪಮೇಯ, ಸಾಧಾರಣಧರ್ಮ,

ವಾಚಕಶಬ್ದ ಈ ನಾಲ್ಕೂ ಇರುವುದರಿಂದ ಇಲ್ಲಿ ಪೂರ್ಣೋಪಮಾಲಂಕಾರವಿದೆ. ಶ್ರೀಸುಧೀಂದ್ರತೀರ್ಥವಿರಚಿತ ಅಲಂಕಾರಮಂಜರಿಯಂತೆ ಅದರ ಲಕ್ಷಣ ಹೀಗಿದೆ—

ಉಪಮಾ ಸಾಮ್ಯನಿಷ್ಪತ್ತಿರುಭಯೋರನುರೂಪಯೋಃ ।
ಪೂರ್ಣಾ ವರ್ಣ್ಯೋಪಮಾಧರ್ಮೋಪಾದನಾಂ ಪ್ರತಿಪಾದನೇ ।
ವಿಭಾತಿ ವಿಜಯೀಂದ್ರೋಽಯಂ ಕಲಾಭಿಶ್ಚಂದ್ರಮಾ ಇವ ॥

ಅನುರೂಪವಾದ ಉಪಮಾನ ಉಪಮೇಯಗಳಿಗೆ ಸಾಮ್ಯ (ಹೋಲಿಕೆಯು) ವರ್ಣಿತವಾದಾಗ ಉಪಮಾಲಂಕಾರವಾಗುತ್ತದೆ. ಉಪಮಾನ, ಉಪಮೇಯ, ಸಾಧಾರಣಧರ್ಮ, ಇವ ಮುಂತಾದ ಉಪಮಾವಾಚಕ ಶಬ್ದಗಳು ಈ ನಾಲ್ಕೂ ಇದ್ದರೆ ಆಗ ಪೂರ್ಣೋಪಮಾಲಂಕಾರವಾಗುತ್ತದೆ. ಈ ಶ್ರೀವಿಜಯೀಂದ್ರರು ಕಲೆಗಳಿಂದ ಚಂದ್ರನಂತೆ ಶೋಭಿಸುತ್ತಾರೆ ಎಂಬಲ್ಲಿ ಚಂದ್ರ ಉಪಮಾನ, ವಿಜಯೀಂದ್ರರೇ ಉಪಮೇಯ, ಕಲೆಗಳು ಅಂದರೆ ಚಂದ್ರನ ಅಂಶಗಳು ಮತ್ತು 64 ವಿದ್ಯಾಪ್ರಭೇದಗಳು, ಇವೆರಡನ್ನೂ ಶ್ಲೇಷದ ಮೂಲಕವಾಗಿ ಒಂದೆಂದು ಇಟ್ಟುಕೊಂಡಿದ್ದಾರೆ. (ಶ್ಲೇಷ ಮೂಲಕ ಅಭೇದಾಧ್ಯವಸಾಯ) ಕಲೆಗಳೇ ಸಾಧಾರಣ ಧರ್ಮ. ಇವ ಎಂಬುದು ವಾಚಕಶಬ್ದ. ಕಠಿನಾಽಪಿ ಎಂಬ ಶ್ಲೋಕದಲ್ಲಿಯೂ ಈ ನಾಲ್ಕು ಇರುವುದಿರಂದ ಪೂರ್ಣೋಪಮಾಲಂಕಾರವಿದೆ ಎಂದು ತಿಳಿಯಬೇಕು.



**ಅವತಾರಿಕಾ** — ಶ್ರೀನಾರಾಯಣಪಂಡಿತಾಚಾರ್ಯರು ಶ್ರೀಮತ್ಸುಮಧ್ವವಿಜಯಾದಿ ಕೃತಿರತ್ನಗಳ ನಿರ್ಮಾತೃಗಳು, ಕವಿಶಿರೋಮಣಿಗಳು. ಆದ್ದರಿಂದ ಅವರ ಅನುಗ್ರಹ ಪ್ರಾರ್ಥನೆಯನ್ನು ಕವಿಗಳು ಮುಂದಿನ ಶ್ಲೋಕದಿಂದ ಮಾಡುತ್ತಿದ್ದಾರೆ —

**ವಾಣೀಪಾಣಿತಲಾಸಕ್ತವೀಣಾರವವಿಡಂಬಿನೀ ।**
**ನಾನಾಪ್ರಬಂಧಚತುರಾ ಭಾತಿ ನಾರಾಯಣಾರ್ಯಗೀಃ ॥ 6 ॥**

**ಪದಚ್ಛೇದ** — ವಾಣೀಪಾಣಿತಲಾಸಕ್ತವೀಣಾರವವಿಡಂಬಿನೀ, ನಾನಾಪ್ರಬಂಧಚತುರಾ, ಭಾತಿ, ನಾರಾಯಣಾರ್ಯಗೀಃ ।

**ಅನ್ವಯ** — ವಾಣೀಪಾಣಿತಲಾಸಕ್ತವೀಣಾರವವಿಡಂಬಿನೀ ನಾನಾಪ್ರಬಂಧಚತುರಾ ನಾರಾಯಣಾರ್ಯಗೀಃ ಭಾತಿ ।

**ಅನ್ವಯಾರ್ಥ** —

**ವಾಣೀಪಾಣಿತಲಾಸಕ್ತವೀಣಾರವವಿಡಂಬಿನೀ — ವಾಣೀ** = ಸರಸ್ವತೀದೇವಿಯ, **ಪಾಣಿತಲ** = ಅಂಗೈಗಳ ಮೇಲೆ, **ಆಸಕ್ತ** = ಯಾವಾಗಲೂ ಸಂಬಂಧವನ್ನು ಹೊಂದಿರುವ, **ವೀಣಾ** = ವೀಣೆಯ, **ರವ** = ಧ್ವನಿಯನ್ನು (ಇಂಚರವನ್ನು) **ವಿಡಂಬಿನೀ** = ಅನುಕರಿಸುವ, (ಉಪಹಾಸ ಮಾಡುವ)

**ನಾನಾಪ್ರಬಂಧಚತುರಾ — ನಾನಾ** = ಅನೇಕ ಪ್ರಕಾರವುಳ್ಳ, **ಪ್ರಬಂಧ** = ಕಾವ್ಯ ವಿಸ್ತಾರಗಳಲ್ಲಿ **ಚತುರಾ** = ಕುಶಲವಾದ

**ನಾರಾಯಣಾರ್ಯಗೀಃ** = ನಾರಾಯಣಪಂಡಿತಾರ್ಯರ ಮಾತು,

**ಭಾತಿ** = ಪ್ರಕಾಶಿಸುತ್ತದೆ.

**ತಾತ್ಪರ್ಯ** — ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯರಾದ ಶ್ರೀಮದಾನಂದತೀರ್ಥರ ಗೃಹಸ್ಥಾಶ್ರಮಿ ಶಿಷ್ಯರಲ್ಲಿ ಅಗ್ರಗಣ್ಯರಾದವರು ಶ್ರೀತ್ರಿವಿಕ್ರಮಪಂಡಿತಾಚಾರ್ಯರು. ಅವರ ಸುಪುತ್ರರೇ ಶ್ರೀನಾರಾಯಣಪಂಡಿತಾ-ಚಾರ್ಯರು. ಅವರು ರಚಿಸಿರುವ ಗುರುವಿಜಯ ಮಹಾಕಾವ್ಯವು 'ಆದಿಕಾವ್ಯ'ವೆಂದು ಪ್ರಸಿದ್ಧವಾಗಿರುವ ಶ್ರೀಸುಮಧ್ವವಿಜಯ ಮಹಾಕಾವ್ಯವು, ಸಂಗ್ರಹರಾಮಾಯಣ, ಶುಭೋದಯ, ಪಾರಿಜಾತಹರಣ ಮುಂತಾ-ದುವುಗಳು ಕವಿಗಳಿಗೆ ಮಾರ್ಗದರ್ಶಕಗಳಾಗಿವೆ. ಅಂತಹ ಶ್ರೀಮನ್ನಾರಾಯಣಪಂಡಿತಾಚಾರ್ಯರ ಕವಿತಾವಾಣಿ-ಯನ್ನು ಇಲ್ಲಿ ಹೊಗಳಿದ್ದಾರೆ.

ಸರಸ್ವತೀದೇವಿಯ ಕರಕಮಲದಲ್ಲಿ ಯಾವಾಗಲೂ ವಿರಾಜಿಸುತ್ತಿರುವ ವೀಣೆಯ ಇಂಚರವನ್ನು (ಧ್ವನಿ) ಅನುಕರಿಸುವಂತಹುದು (ಅಷ್ಟೇ ಅಲ್ಲ ತಿರಸ್ಕರಿಸುವಂತಹುದು) ನಾರಾಯಣಪಂಡಿತರ ಕವಿತಾವಾಣಿ. ಅವರ ವಾಣಿಯು ವಿವಿಧ ಶಬ್ದಾಲಂಕಾರ ಅರ್ಥಾಲಂಕಾರ ಚಿತ್ರಬಂಧ, ಧ್ವನಿಗಳಿಂದ ಕೂಡಿದ ಕಾವ್ಯನಿರ್ಮಾಣದಲ್ಲಿ ಅತಿಕುಶಲವಾಗಿದೆ. ಇಂತಹ ನಾರಾಯಣಪಂಡಿತಾಚಾರ್ಯರ ಮಾತು ಶೋಭಿಸುತ್ತಿದೆ ಎಂದು ತಾತ್ಪರ್ಯ.

**ವಿಶೇಷಾಂಶ** — ಇಲ್ಲಿ 'ವೀಣಾರವವಿಡಂಬಿನೀ' 'ಸರಸ್ವತಿಯ ವೀಣೆಯ ಧ್ವನಿಯನ್ನು ಉಪಹಸಿಸುವ' ಎಂಬ ವಿಶೇಷಣದಿಂದಲೇ ಪಂಡಿತಾಚಾರ್ಯರ ವಾಣಿಗೆ ವೀಣಾರವಕ್ಕಿಂತಲೂ ಅತಿಶಯವು ಸಿದ್ಧಿಸುತ್ತದೆ. ಆಗ 'ವಾಣೀ-ಪಾಣಿತಲಾಸಕ್ತ' ಎಂಬ ವಿಶೇಷಣವು ವ್ಯರ್ಥವಾಗುತ್ತದೆ. 'ವಾಣೀ' ಎಂದರೆ ಸರಸ್ವತಿಯ 'ವಾಣೀ' ಕಂಠಧ್ವನಿಯಿಂದ ಸಹಿತವಾದ, ಪಾಣಿತಲಾಸಕ್ತ =ಕೈಯಲ್ಲಿ ಯಾವಾಗಲೂ ಇರುವ, ವೀಣಾರವವಿಡಂಬಿನೀ = ವೀಣೆಯ ಧ್ವನಿಯನ್ನು ಮೀರಿಸುವ, ಎಂಬ ಅರ್ಥವನ್ನಿಟ್ಟುಕೊಂಡಾಗ, ವಾಣಿಯ ಕಂಠವಾಣಿಯಿಂದ ಕೂಡಿದ ವೀಣಾ ಧ್ವನಿಯು ಅತಿ-ಮಧುರವಾಗಿರುತ್ತದೆ. ಅದನ್ನು ಪಂಡಿತಾಚಾರ್ಯರ ಮಾತು ಮೀರಿಸುತ್ತದೆ ಎಂಬ ಅಭಿಪ್ರಾಯವು ಸೂಚಿತ-ವಾಗುತ್ತದೆ. ಆದ್ದರಿಂದ ಈ ವಿಶೇಷಣವು 'ವಾಣೀಪಾಣಿತಲಾಸಕ್ತ' ಎಂಬ ವಿಶೇಷಣವು ವ್ಯರ್ಥವಲ್ಲ 'ಪಾಣಿತಲಾಸಕ್ತ' ಎಂದು ಹೇಳುವುದರಿಂದ ಯಾವಾಗಲೂ ವೀಣೆಯನ್ನು ಬಾರಿಸುವ ಸರಸ್ವತಿಯು ಈಗಲೂ ವೀಣೆ ಬಾರಿಸುತ್ತಿದ್ದಾಳೇ ಎಂಬ ಅರ್ಥವೂ ಸೂಚಿತವಾಗುತ್ತಿದೆ.

**ವಿಗ್ರಹ** —

**ವಾಣೀಪಾಣಿತಲಾಸಕ್ತವೀಣಾರವವಿಡಂಬಿನೀ** — ಪಾಣ್ಯೋಃ ತಲಂ ಪಾಣಿತಲಂ, ವಾಣ್ಯಾಃ ಪಾಣಿ-ತಲಂ ವಾಣೀಪಾಣಿತಲಂ, ವಾಣೀಪಾಣಿತಲೇ ಆಸಕ್ತಾ ವಾಣೀಪಾಣಿತಲಾಸಕ್ತಾ, ವಾಣೀಪಾಣಿ-ತಲಾಸಕ್ತಾ ಚ ಸಾ ವೀಣಾ ಚ ವಾಣೀಪಾಣಿತಲಾಸಕ್ತವೀಣಾ, ವಾಣೀ..... ವೀಣಾಯಾಃ ರವಃ ವಾಣೀ..... ವೀಣಾರವಃ, ವಿಡಂಬಃ ಅಸ್ಯಾಃ ಅಸ್ತೀತಿ ವಿಡಂಬನೀ (ಅತ ಇನಿ ಠನೌ 5–2–15 ಎಂಬ ಸೂತ್ರದಿಂದ ಣಿನಿಪ್ರತ್ಯಯ) ಅಥವಾ ವಿಡಂಬಯತಿ ತಾಚ್ಛೀಲ್ಯೇನ ಇತಿ ವಿಡಂಬಿನೀ. ಸುಪ್ಯಜಾತೌ ಣಿನಿಸ್ತಾಚ್ಛೀಲ್ಯೇ 3–2–78 ಎಂಬ ಸೂತ್ರದಿಂದ ಣಿನಿಪ್ರತ್ಯಯ.

**ನಾನಾಪ್ರಬಂಧಚತುರಾ** — ನಾನಾವಿಧಾಃ ಪ್ರಬಂಧಾಃ ನಾನಾಪ್ರಬಂಧಾಃ ನಾನಾಪ್ರಬಂಧೇಷು ಚತುರಾ ನಾನಾಪ್ರಬಂಧಚತುರಾ ।

**ನಾರಾಯಣಾರ್ಯಗೀಃ** — ನಾರಾಯಣಾ ಇತಿ ಆರ್ಯಾಃ ನಾರಾಯಣಾರ್ಯಾಃ, ನಾರಾ-ಯಣಾರ್ಯಾಣಾಂ ಗೀಃ ನಾರಾಯಣಾರ್ಯಗೀಃ ।

**ಕ್ರಿಯಾಪದ** — ಭಾತಿ, ಭಾತಃ, ಭಾಂತಿ । ಭಾಸಿ, ಭಾಥಃ, ಭಾಥ । ಭಾಮಿ ಭಾವಃ, ಭಾಮಃ ॥ ಭಾ-ದೀಪ್ತೌ , ಇತಿ ದೀಪ್ತ್ಯರ್ಥಕಾತ್ ಭಾಧಾತೋಃ ಅಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವರ್ತಮಾನೇ 'ಲಟ್' ಪ್ರ.ಪು.ಏ. ಭಾತಿ ಇತಿ ರೂಪಮ್ ।

**ಪ್ರಯೋಗ**— ನಾರಾಯಣಾರ್ಯಗೀಃ ಭಾತಿ । (ಕರ್ತರಿ)

ನಾರಾಯಣಾರ್ಯಗಿರಾ ಭಾಯತೇ । (ಭಾವೇ)

**ಅಲಂಕಾರ** — ಇಲ್ಲಿ – ವಾಣೀ, ಪಾಣಿ, ವೀಣಾ, ಎಂದು ಣಕಾರಾವೃತ್ತಿಯಿರುವುದರಿಂದ 'ವೃತ್ತ್ಯನು-ಪ್ರಾಸಾಲಂಕಾರ'ವಿದೆ. ಅದರ ಲಕ್ಷಣ ಹಿಂದೆಯೇ ಬಂದಿದೆ. ವೀಣಾರವವಿಡಂಬಿನೀ ಎಂಬ ವಿಶೇಷಣಕ್ಕೆ ವೀಣೆಯ ಧ್ವನಿಯನ್ನು ಅನುಕರಿಸುವಂತಹ ಹೋಲುವಂತಹ ಎಂಬ ಅರ್ಥ ಇಟ್ಟುಕೊಂಡಾಗ 'ಆರ್ಥೀ' ಉಪಮಾ ಅಲಂಕಾರವಾಗುತ್ತದೆ. ಲಕ್ಷಣ ಹಿಂದೆಯೇ ಬಂದಿದೆ.

'ವಿಡಂಬಿನೀ' ಎಂಬುದಕ್ಕೆ 'ತಿರಸ್ಕರಿಸುವಂತಹ' ಎಂಬ ಅರ್ಥ ಇಟ್ಟುಕೊಂಡಾಗ ಉಪಮಾನವಾದ ವೀಣಾ-ರವವನ್ನು ತಿರಸ್ಕರಿಸುತ್ತದೆ ಎಂದು ಅರ್ಥವು ಬರುವುದರಿಂದ ಪ್ರತೀಪಾಲಂಕಾರವಾಗುತ್ತದೆ.

ಪ್ರತೀಪಾಲಂಕಾರದ ಲಕ್ಷಣ ಶ್ರೀಸುಧೀಂದ್ರತೀರ್ಥವಿರಚಿತ ಅಲಂಕಾರಮಂಜರಿಯಲ್ಲಿದ್ದಂತೆ—

ಪ್ರತೀಪಮನ್ಯನ್ಯಕ್ಕಾರಃ ಪ್ರಕೃತಾರ್ಥೋಽಪಮೇಯತಃ ।
ರಾಧೇಯದಾನಗಾಥಾ ಕಾ ವಿಜಯೀಂದ್ರೋಽಪಿ ತಾದೃಶಃ ॥

ಪ್ರಕೃತವಾದ ವಿಷಯಕ್ಕೆ ಉಪಮೇಯವಾಗಿರುವ ವಸ್ತುವಿನಿಂದ, ಅಪ್ರಕೃತವಾದ ಉಪಮಾನದ ತಿರಸ್ಕಾರವು ಪ್ರತೀಪಾಲಂಕಾರವು. ರಾಧಾಪುತ್ರನಾದ ಕರ್ಣನ 'ದಾನ'ದ ಪ್ರಶಂಸಾವಚನವೇನು ? ಶ್ರೀವಿಜಯೀಂದ್ರರು ರಾಧೇಯನಂತೆಯೇ ಇರತಕ್ಕವರಲ್ಲವೇ ? ಇಲ್ಲಿ ಉಪಮೇಯರಾದ ವಿಜಯೀಂದ್ರರೇ ಸಾಕು. ಉಪಮಾನವಾದ ಕರ್ಣನು 'ಏಕೆ' ಎಂದು ಹೇಳಿದ್ದರಿಂದ 'ಪ್ರತೀಪಾಲಂಕಾರ'ವಿದೆ.



**ಅವತಾರಿಕಾ** — ಯತಿಕುಲ ಸಾರ್ವಭೌಮರಾದ ಶ್ರೀವ್ಯಾಸರಾಜರು ಜಯಪ್ರದವಾದ ಶ್ರೀಮಧ್ವಸಿದ್ಧಾಂತಕ್ಕೆ ಮೇರುಕೃತಿಗಳಾದ ತಾತ್ಪರ್ಯಚಂದ್ರಿಕಾ, ತರ್ಕತಾಂಡವಾದಿ ಅನೇಕ ಗ್ರಂಥಗಳನ್ನು ಬರೆದಿರುವುದರಿಂದ, ಅವರ ಅನುಗ್ರಹದಿಂದ ನನ್ನ ಕಾವ್ಯವು ಕೂಡ ಪಠನ ಪಾಠನಾದಿಗಳಿಂದ ಓದುವವರಿಗೆ ಜಯಪ್ರದವಾಗಲಿ ಎಂಬ ಅಭಿಪ್ರಾಯದಿಂದ ಶ್ರೀವ್ಯಾಸರಾಜರ ವಾಣಿಯನ್ನು ವಿಜಯವನ್ನು ಕೊಡುವಂತೆ ಪ್ರಾರ್ಥಿಸುತ್ತಿದ್ದಾರೆ.

**ವೃಂದಾರವನಮಂದಾರಮಕರಂದಸಹೋದರೀ ।**
**ವಿಶ್ರುತಾ ವಿಜಯಂ ದದ್ಯಾದ್ ವ್ಯಾಸತೀರ್ಥಾರ್ಯಭಾರತೀ ॥ 7 ॥**

**ಪದಚ್ಛೇದ** — ವೃಂದಾರವನಮಂದಾರಮಕರಂದಸಹೋದರೀ, ವಿಶ್ರುತಾ, ವಿಜಯಂ, ದದ್ಯಾತ್, ವ್ಯಾಸ ತೀರ್ಥಾರ್ಯಭಾರತೀ ।

**ಅನ್ವಯ** — ವೃಂದಾರವನಮಂದಾರಮಕರಂದಸಹೋದರೀ ವಿಶ್ರುತಾ ವ್ಯಾಸತೀರ್ಥಾರ್ಯಭಾರತೀ ವಿಜಯಂ ದದ್ಯಾತ್ ।

**ಅನ್ವಯಾರ್ಥ —**

**ವೃಂದಾರವನಮಂದಾರಮಕರಂದಸಹೋದರೀ — ವೃಂದಾರ** = ದೇವತೆಗಳ, **ವನ** = ನಂದನ-ವೆಂಬ ಉದ್ಯಾನವನದ, **ಮಂದಾರ** = ಮಂದಾರವೆಂಬ ದೇವ ವೃಕ್ಷದ ಪುಷ್ಪಗಳ, **ಮಕರಂದ** = (ಪುಷ್ಪ) ರಸಕ್ಕೆ, **ಸಹೋದರೀ** = ಒಡಹುಟ್ಟಿದವಳಂತಿರುವ, (ಅದಕ್ಕೆ ಸಮಾನವಾದ)

**ವಿಶ್ರುತಾ** = ಪ್ರಸಿದ್ಧವಾದ,

**ವ್ಯಾಸತೀರ್ಥಾರ್ಯಭಾರತೀ — ವ್ಯಾಸತೀರ್ಥ** = ಶ್ರೀವ್ಯಾಸರಾಜತೀರ್ಥರೆಂಬ, **ಆರ್ಯ** = ಪೂಜ್ಯರ, **ಭಾರತೀ** = ವಾಣಿಯು,

(**ಮೇ** = ನನಗೆ)

**ವಿಜಯಂ** = ಗೆಲುವನ್ನು (ಉತ್ಕರ್ಷವನ್ನು),

**ದದ್ಯಾತ್** = ಕೊಡಲಿ.

**ತಾತ್ಪರ್ಯ —** ದೇವತೆಗಳ ಉದ್ಯಾನವನಕ್ಕೆ 'ನಂದನ'ವೆಂದು ಹೆಸರು. ಅಲ್ಲಿ ಮಂದಾರ ದಿವ್ಯವೃಕ್ಷಗಳಿವೆ. ಅವುಗಳಲ್ಲಿ ಸುಗಂಧಿಯಾದ ಮತ್ತು ಮಕರಂದದಿಂದ ತುಂಬಿದ ಹೂವುಗಳು ಅರಳುತ್ತವೆ. ಶ್ರೀಮದಾನಂದತೀರ್ಥರ ಸಿದ್ಧಾಂತವೆಂಬ ಉದ್ಯಾನವನದಲ್ಲಿ ಮಂದಾರವೃಕ್ಷದಂತೆ ಶೋಭಿಸುತ್ತಿರುವ ಶ್ರೀಮದ್‌ವ್ಯಾಸರಾಜತೀರ್ಥ ಗುರು-ಸಾರ್ವಭೌಮರ ಗ್ರಂಥ ವಾಣಿಯು ದೇವವೃಕ್ಷವಾದ ಮಂದಾರದ ಪುಷ್ಪಗಳ ಮಕರಂದ ರಸದಂತೆ ಅತ್ಯಂತ ಮಧುರವಾಗಿದೆ, ಅದರಂತೆ ಜರಾಮರಣ ಪರಿಹಾರಕವಾಗಿದೆ. ಅಂತಹ ಗುರುವರ್ಯರ ತಾತ್ಪರ್ಯಚಂದ್ರಿಕಾ, ನ್ಯಾಯಾಮೃತ, ತರ್ಕತಾಂಡವಾದಿ ವಾಣಿಯು ನನಗೆ ವಿಜಯವನ್ನು ಕೊಡಲಿ ಎಂದು ಕವಿವರ್ಯರು ಪ್ರಾರ್ಥಿ-ಸಿದ್ದಾರೆ.

**ವಿಶೇಷಾಂಶ —** 'ವೃಂದಾರಕಾ ದೈವತಾನಿ' ಎಂದು ಅಮರಕೋಶ, ಅಲ್ಲಿ ವೃಂದಾರಶಬ್ದವಿಲ್ಲ . ಆದರೂ ಕೋಶಾಂತರ ಬಲದಿಂದ ಅಥವಾ ವೃಂದಂ ಋಚ್ಛಂತಿ ಗಚ್ಛಂತಿ ಇತಿ ವೃಂದಾರಾಃ ಎಂಬ ವ್ಯುತ್ಪತ್ತಿಯನ್ನಿಟ್ಟುಕೊಂಡು ವೃಂದಾರ ಶಬ್ದವು ದೇವತಾ ವಾಚಕವೆಂದು ಇಟ್ಟುಕೊಳ್ಳಬೇಕು.

ಪಂಚೈತೇ ದೇವತರವಃ ಮಂದಾರಃ ಪಾರಿಜಾತಕಃ ।
ಸಂತಾನಃ ಕಲ್ಪವೃಕ್ಷಶ್ಚ ಪುಂಸಿ ವಾ ಹರಿಚಂದನಮ್ ॥

ಎಂಬ ಅಮರಕೋಶದಿಂದ ಮಂದಾರವೃಕ್ಷವು ಬೇರೆ ಕಲ್ಪವೃಕ್ಷವು ಬೇರೆ ಎಂದು ತಿಳಿದುಬರುತ್ತದೆ . ಆದರೂ ಇಲ್ಲಿರುವ ಮಂದಾರ ಪದದಿಂದ 'ಲಕ್ಷಣಾವೃತ್ತಿ'ಯಿಂದ ಕಲ್ಪವೃಕ್ಷವನ್ನಿಟ್ಟುಕೊಳ್ಳಬೇಕು. ಕಲ್ಪವೃಕ್ಷವು ಸಂಕಲ್ಪಿಸಿದ ವಿಷಯವನ್ನೆಲ್ಲಾ ಕೊಡುವಂತೆ ವ್ಯಾಸರಾಜರ ಗ್ರಂಥಗಳ ವಾಣಿಯು ಎಲ್ಲಾ ಅಭೀಷ್ಟಗಳನ್ನು ಕೊಡುತ್ತದೆ ಎಂಬ ಅರ್ಥವನ್ನು ಇಲ್ಲಿ ಇಟ್ಟುಕೊಂಡಿದ್ದಾರೆ. ಮಂದಾರ ಪುಷ್ಪಗಳ ಮಕರಂದ ಸಹೋದರಿಯಾದುದು. ವ್ಯಾಸರಾಜ-ತೀರ್ಥರ ವಾಣಿಯು, ಎಂದು ಹೇಳಿದುದರಿಂದ ಒಬ್ಬಳೇ ತಾಯಿಯಲ್ಲಿ ಹುಟ್ಟಿದ ಅವಳಿ ಜವಳಿ ಹೆಣ್ಣುಮಕ್ಕಳಲ್ಲಿ ಒಬ್ಬಳಿಗೆ ಇನ್ನೊಬ್ಬಳ ಸಾದೃಶ್ಯವಿರುವಂತೆ ಕಲ್ಪವೃಕ್ಷದ ರಸಕ್ಕೆ ಸಮಾನವಾದುದು ವ್ಯಾಸರಾಜರ ವಾಣಿಯು ಎಂಬ ಅಭಿಪ್ರಾಯವು ಬರುತ್ತದೆ. (ಅಥವಾ ಸಹೋದರೀ = ತಂಗಿ ಎಂಬ ಅರ್ಥ ಇಟ್ಟುಕೊಂಡರೂ ಅದಕ್ಕೆ ಸಮಾನ ಎಂಬ ಅರ್ಥ ಬರುತ್ತದೆ.) 'ವಿಶ್ರುತಾ' ಎಂಬ ವಿಶೇಷಣದಿಂದ ಪ್ರಸಿದ್ಧವಾದ ವ್ಯಾಸತೀರ್ಥರ ವಾಣಿಯಂತೆ ನನ್ನ ಕಾವ್ಯವಾಣಿಯೂ ಅವರ ಅನುಗ್ರಹದಿಂದ ಪ್ರಸಿದ್ಧವಾಗಲಿ ಎಂಬ ಅಭಿಪ್ರಾಯವು ಧ್ವನಿತವಾಗುತ್ತದೆ. ವ್ಯಾಸರಾಜರ ವಾಣಿಯು ಈ ಕಾವ್ಯವನ್ನು ಪಠಿಸುವವರಿಗೂ, ಪಾಠ ಹೇಳುವವರಿಗೂ, ವಿಜಯವನ್ನು ಕೊಡಲಿ ಎಂಬ ಅರ್ಥವೂ

ಧ್ವನಿತವಾಗುತ್ತದೆ. ಇಲ್ಲಿ 'ವೃಂದಾರವನ ಮಂದಾರ ಮಕರಂದ' ಎಂದು ಹೇಳುವಾಗ ಶ್ರೀವ್ಯಾಸರಾಜರು 'ಮಂದಾರಮಂಜರೀ' ಎಂಬ ಹೆಸರಿನ ಅತ್ಯಂತ ಪ್ರಸಿದ್ಧವಾದ ಟಿಪ್ಪಣೀಗ್ರಂಥಗಳನ್ನು ಬರೆದಿದ್ದಾರೆ ಎಂಬ ಅರ್ಥವೂ ಸೂಚಿತವಾಗುತ್ತದೆ.

**ವಿಗ್ರಹ—**

**ವೃಂದಾರವನಮಂದಾರಮಕರಂದಸಹೋದರೀ** — ವೃಂದಾರಾಣಾಂ ವನಂ ವೃಂದಾರವನಂ, ಮಂದಾರಾಣಾಂ ಪುಷ್ಪಾಣಿ ಮಂದಾರಾಣಿ (ಪುಷ್ಪಮೂಲೇಷು ಬಹುಲಂ ವಾ. 4-3-166 ಎಂಬ ವಾರ್ತಿಕದಿಂದ ವಿಕಾರ, ಅಥವಾ ಅವಯವ ಎಂಬ ಅರ್ಥದಲ್ಲಿ ಬಂದ ಪ್ರತ್ಯಯಕ್ಕೆ ಲುಕ್ ಬಂದಿದೆ. ಲುಕ್ ಎಂದರೆ ಲೋಪ ಎಂದು ಅರ್ಥ), ವೃಂದಾರವನಮಂದಾರಾಣಾಂ ಮಕರಂದಃ ವೃಂದಾರವನಮಂದಾರಮಕರಂದಃ, ವೃಂದಾರವನಮಂದಾರಮಕರಂದಸ್ಯ ಸಹೋದರೀ ವೃಂದಾರವನಮಂದಾರಮಕರಂದಸಹೋದರೀ.

**ವ್ಯಾಸತೀರ್ಥಾರ್ಯಭಾರತೀ** — ವ್ಯಾಸತೀರ್ಥಾಃ ಇತಿ ಆರ್ಯಾಃ = ವ್ಯಾಸತೀರ್ಥಾರ್ಯಾಃ (ಸಂಭಾವನಾಪೂರ್ವಪದ ಕರ್ಮಧಾರಯ) ವ್ಯಾಸತೀರ್ಥಾರ್ಯಾಣಾಂ ಭಾರತೀ = ವ್ಯಾಸತೀರ್ಥಾರ್ಯಭಾರತೀ.

**ವಿಜಯಂ** — ವಿಶೇಷೇಣ ಜಯಃ = ವಿಜಯಃ, ತಮ್.

**ಕ್ರಿಯಾಪದ** – ದದ್ಯಾತ್, ದದ್ಯಾತಾಂ, ದದ್ಯುಃ । ದದ್ಯಾಃ, ದದ್ಯಾತಂ, ದದ್ಯಾತ । ದದ್ಯಾಂ, ದದ್ಯಾವ, ದದ್ಯಾಮ ॥ ದಾನಾರ್ಥಕಾತ್ 'ಡುದಾಞ್ - ದಾನೇ' ಇತಿ ದಾಧಾತೋಃ ಸಕರ್ಮಕಾತ್ ಪರಸ್ಮೈಪದಿನಃ 'ವಿಧಿ ನಿಮಂತ್ರಣಾಮಂತ್ರಣಸಂಪ್ರಶ್ನಪ್ರಾರ್ಥನೇಷು ಲಿಙ್' ಇತಿ ಪ್ರಾರ್ಥನಾಯಾಂ ಲಿಙ್ಪ್ರಥಮಪುರುಷೇ ಏಕವಚನೇ ದದ್ಯಾತ್ ಇತಿ ರೂಪಂ. ಇದು 'ಆಶೀರ್ಲಿಙ್' ರೂಪವಲ್ಲ, ಆ ಲಕಾರದಲ್ಲಿ ದೇಯಾತ್, ದೇಯಾಸ್ತಾಂ, ದೇಯಾಸುಃ । ದೇಯಾಃ, ದೇಯಾಸ್ತಂ, ದೇಯಾಸ್ತ । ದೇಯಾಸಂ, ದೇಯಾಸ್ವ, ದೇಯಾಸ್ಮ ॥ ಎಂದು ರೂಪವಾಗುತ್ತದೆ. 'ಏಜಿಲಿಙಿ' ಎಂಬ ಸೂತ್ರದಿಂದ 'ದಾ' ಎಂಬುದು ಅಲ್ಲಿ 'ದೇ' ಎಂದಾಗುತ್ತದೆ. ಧಾತುವಿಗೆ ದ್ವಿತ್ವವೂ ಬರುವುದಿಲ್ಲ.

**ಪ್ರಯೋಗ—** ವ್ಯಾಸತೀರ್ಥಾರ್ಯಭಾರತೀ ವಿಜಯಂ ದದ್ಯಾತ್ । (ಕರ್ತರಿ).

ವ್ಯಾಸತೀರ್ಥಾರ್ಯಭಾರತ್ಯಾ ವಿಜಯಃ ದೀಯೇತ । (ಕರ್ಮಣಿ).

**ಅಲಂಕಾರ** — ಇಲ್ಲಿ 'ವೃಂದಾರವನಮಂದಾರಮಕರಂದಸಹೋದರೀ' ಎಂಬಲ್ಲಿ ವೃತ್ತ್ಯನುಪ್ರಾಸಾಲಂಕಾರ-ವಿದೆ. ಅಲ್ಲದೆ ಆ ಶ್ಲೋಕದಲ್ಲಿ ಆರ್ಥಿಪೂರ್ಣೋಪಮಾಲಂಕಾರವೂ ಇದೆ. 'ವೃಂದಾರವನಮಂದಾರಮಕರಂದ'ವು ಉಪಮಾನ, ಭಾರತೀ ಉಪಮೇಯ, 'ವಿಜಯಪ್ರದಾನ' ಗೆಲುವನ್ನು ಉಂಟುಮಾಡುವುದು, (ಉತ್ಸಾಹವನ್ನು ಕೊಡುವುದು) ಸಾಧಾರಣಧರ್ಮ. ಸಹೋದರೀ ವಾಚಕ ಶಬ್ದ. ಇವುಗಳೆಲ್ಲವೂ ಇರುವುದರಿಂದ ಇದು ಉಪಮಾ-ಲಂಕಾರವಾಗುತ್ತದೆ. ಲಕ್ಷಣವನ್ನು ಹಿಂದೆಯೇ ಹೇಳಿದೆ.



**ಅವತಾರಿಕಾ** — ಹಿಂದಿನ ಶ್ಲೋಕದಲ್ಲಿ ಶ್ರೀವ್ಯಾಸತೀರ್ಥರವಾಣಿಯು ಮಾಧುರ್ಯಭರಿತವಾದುದರಿಂದ ಎಲ್ಲರಿಗೂ ಸ್ವೀಕರಿಸಲು ಯೋಗ್ಯವೆಂದು ಹೇಳಿದ್ದಾಯಿತು. ಆದರೆ ಶ್ರೀವ್ಯಾಸತೀರ್ಥರ ಮಾತು ಮಾಧುರ್ಯಭರಿತ ಮತ್ತು ಸರ್ವೋಪಾದೇಯವೆಂಬುದು ಹೇಗೆ ಎಂಬ ಪ್ರಶ್ನೆಗೆ ಉತ್ತರವನ್ನು ಇಲ್ಲಿ ಹೇಳುತ್ತಿದ್ದಾರೆ. ತ್ರಿಲೋಕವಿಶ್ರುತವಾದ ಅವರ ಚಂದ್ರಿಕಾದಿ ಗ್ರಂಥಗಳ ಶ್ರವಣಮನನಾದಿಗಳನ್ನು ಮಾಡಿದಾಗ ಎಲ್ಲರೂ 'ಶ್ರೀವ್ಯಾಸರಾಜರಿಗೆ ನಮೋ ನಮಃ' ಎಂದು ಹೇಳುತ್ತಾ ಅವರ ದಾಸರಾಗುತ್ತಾರೆ. ಇದರಿಂದ ಅವರ ಗ್ರಂಥಗಳು ಮಾಧುರ್ಯಪೂರ್ಣ, ಮುಮುಕ್ಷು-ಗಳಿಗೆ ಅತ್ಯಂತ ಉಪಾದೇಯವೆಂದು ಸಿದ್ಧವಾಗುತ್ತದೆ ಎಂಬ ವಿಷಯವನ್ನು ಇಲ್ಲಿ ಹೇಳುತ್ತಿದ್ದಾರೆ—

**ವ್ಯಾಸಸೂತ್ರಪದಾರ್ಥೋಪನ್ಯಾಸಮಾಕರ್ಣ್ಯ ಮಾನ್ಯಪಿ ।**
**ವ್ಯಾಸರಾಜಸ್ಯ ಭಜತೇ ದಾಸತಾಂ ಕೋ ನ ಕೋವಿದಃ ॥ 8 ॥**

**ಪದಚ್ಛೇದ** — ವ್ಯಾಸಸೂತ್ರಪದಾರ್ಥೋಪನ್ಯಾಸಂ, ಆಕರ್ಣ್ಯ, ಮಾನೀ, ಅಪಿ, ವ್ಯಾಸರಾಜಸ್ಯ, ಭಜತೇ, ದಾಸತಾಂ, ಕಃ, ನ, ಕೋವಿದಃ ।

**ಅನ್ವಯ** — ವ್ಯಾಸಸೂತ್ರಪದಾರ್ಥೋಪನ್ಯಾಸಂ ಆಕರ್ಣ್ಯ ಮಾನೀ ಅಪಿ ಕಃ ಕೋವಿದಃ ವ್ಯಾಸರಾಜಸ್ಯ ದಾಸತಾಂ ನ ಭಜತೇ ।

**ಅನ್ವಯಾರ್ಥ** —

**ವ್ಯಾಸಸೂತ್ರಪದಾರ್ಥೋಪನ್ಯಾಸಂ** — **ವ್ಯಾಸ** = ಶ್ರೀವೇದವ್ಯಾಸದೇವರ, **ಸೂತ್ರ** = ಬ್ರಹ್ಮ-ಮೀಮಾಂಸಾ ಸೂತ್ರಗಳ, **ಪದ** = ಪದಗಳ, **ಅರ್ಥೋಪನ್ಯಾಸಂ** = ನಿಗೂಢ ಗಂಭೀರಾರ್ಥಗಳ ಚಂದ್ರಿಕಾದಿ ಗ್ರಂಥರೂಪವಾಗಿರುವ ವಾಕ್ ಪ್ರಸ್ತಾಪವನ್ನು

**ಆಕರ್ಣ್ಯ** = ಕೇಳಿ

**ಮಾನೀ ಅಪಿ** = ಅಹಂಕಾರದಿಂದ ಕೂಡಿದ್ದರೂ

**ಕಃ ಕೋವಿದಃ** = ಯಾವ ವಿದ್ವಾಂಸನು

**ವ್ಯಾಸರಾಜಸ್ಯ** = ಶ್ರೀವ್ಯಾಸರಾಜತೀರ್ಥರ

**ದಾಸತಾಂ** = ಶಿಷ್ಯತ್ವವನ್ನು

**ನ ಭಜತೇ** = ಹೊಂದುವುದಿಲ್ಲ ?

(ಎಲ್ಲಾ ಪಂಡಿತರೂ ತಮ್ಮ ಅಹಂಕಾರವನ್ನು ಬಿಟ್ಟು ಅವರ ದಾಸಭಾವ - ಶಿಷ್ಯಭಾವಗಳನ್ನು ಹೊಂದಿಯೇ ಹೊಂದುತ್ತಾರೆ).

**ತಾತ್ಪರ್ಯ** — ಶ್ರೀವ್ಯಾಸರಾಜರು ಶ್ರೀಮದ್ವೇದವ್ಯಾಸರಿಂದ ರಚಿತವಾದ ಬ್ರಹ್ಮಮೀಮಾಂಸಾಶಾಸ್ತ್ರದ ಪದಗಳ ಗೂಢ ಗಂಭೀರಾಭಿಪ್ರಾಯಗಳನ್ನು ಆಚಾರ್ಯರ ಭಾಷ್ಯ, ಟೀಕಾಚಾರ್ಯರ ಟೀಕೆಗಳನ್ನು ಅನುಸರಿಸಿ ತಾತ್ಪರ್ಯ-ಚಂದ್ರಿಕಾದಿ ಗ್ರಂಥಗಳಲ್ಲಿ ಉಪನ್ಯಾಸ ರೂಪವಾಗಿ ಗ್ರಥನ ಮಾಡಿದ್ದಾರೆ. ನಾನು 'ಪಂಡಿತಶಿರೋಮಣಿ' 'ನನ್ನನ್ನು ಮೀರಿಸುವವನು ಯಾವನೂ ಇಲ್ಲ' ಎಂಬ ಅಹಂಕಾರದಿಂದ ಕೂಡಿದ್ದರೂ ಸಹೃದಯನಾದ ಸಾತ್ತ್ವಿಕ ಪಂಡಿತನು ವ್ಯಾಸತೀರ್ಥಗುರುವರ್ಯರ ಈ ಗ್ರಂಥಗಳನ್ನು ಶ್ರವಣ ಮಾಡಿದಾಗ, ಮನನ ಮಾಡಿದಾಗ, ಹಾಗೂ ಆ ವಿಷಯ-ಗಳನ್ನು ಪರಮಾತ್ಮನ ಕಂಠಕ್ಕೆ ಗುಣಮಾಲಿಕೆಯಾಗಿಟ್ಟು ಧ್ಯಾನ ಮಾಡಿದಾಗ, ಪರಮಾನಂದಭರಿತನಾಗುತ್ತಾನೆ.

ಇಂತಹ ಪರಮೋಪಕಾರ ಮಾಡಿರುವ ವ್ಯಾಸರಾಜರ ದಾಸನು ನಾನು, ಶಿಷ್ಯನು ನಾನು ಎಂದು ಹೇಳಿಕೊಳ್ಳದೆ ಇರುವುದಿಲ್ಲ. ನಿರಹಂಕಾರಿಗಳಾದ ವಿದ್ವಾಂಸರು ಅವರ ದಾಸರು ಮತ್ತು ಶಿಷ್ಯರಾಗುವುದರಲ್ಲಿ ಸಂದೇಹವೇ ಇಲ್ಲ.

ಇದರಿಂದ ಪೂರ್ವಶ್ಲೋಕದಲ್ಲಿ ಹೇಳಿದಂತೆ ವ್ಯಾಸರಾಜ ಗುರುವರ್ಯರ ವಾಣಿಯು ಮಾಧುರ್ಯ ಪರಿಪೂರ್ಣವಾಗಿದ್ದು ವಿವೇಕಿಗಳಾದ ಪಂಡಿತರಿಗೆ ಅತ್ಯಂತ ಉಪಾದೇಯವೆಂದು ತಿಳಿದುಬರುತ್ತದೆ .

ವಿಗ್ರಹ —

**ವ್ಯಾಸಸೂತ್ರಪದಾರ್ಥೋಪನ್ಯಾಸಂ** — ವ್ಯಾಸಸ್ಯ ಸೂತ್ರಾಣಿ = ವ್ಯಾಸಸೂತ್ರಾಣಿ, ವ್ಯಾಸಸೂತ್ರಾಣಾಂ ಪದಾನಿ = ವ್ಯಾಸಸೂತ್ರಪದಾನಿ, ವ್ಯಾಸಸೂತ್ರಪದಾನಾಂ ಅರ್ಥಾಃ = ವ್ಯಾಸಸೂತ್ರಪದಾರ್ಥಾಃ, ವ್ಯಾಸಸೂತ್ರಪದಾರ್ಥಾನಾಂ ಉಪನ್ಯಾಸಃ = ವ್ಯಾಸಸೂತ್ರಪದಾರ್ಥೋಪನ್ಯಾಸಃ, ತಮ್ ।

**ವ್ಯಾಸರಾಜಸ್ಯ** — ಮಾನಃ ಅಸ್ಯ ಈಸ್ತೀತಿ ಮಾನೀ । ವ್ಯಾಸಃ ರಾಜಾ ಯಸ್ಯ ಸಃ ವ್ಯಾಸರಾಜಃ, ತಸ್ಯ ।

**ಕ್ರಿಯಾಪದ** — ಭಜತೇ, ಭಜೇತೇ, ಭಜಂತೇ । ಭಜಸೆ, ಭಜೇಥೇ, ಭಜಧ್ವೇ । ಭಜೇ, ಭಜಾವಹೇ, ಭಜಾಮಹೇ ॥ 'ಭಜ-ಸೇವಾಯಾಂ' ಇತಿ (ಸೇವಾರ್ಥಕಾತ್ 'ಭಜ್') ಧಾತೋಃ (ಸಕರ್ಮಕಾತ್ ಕರ್ತರಿ) ಆತ್ಮನೇಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ ಭಜತೇ ಇತಿ ರೂಪಮ್ ।

**ಪ್ರಯೋಗ** — ಕಃ ಕೋವಿದಃ ದಾಸತಾಂ ನ ಭಜತೇ । (ಕರ್ತರಿ).

ಕೇನ ಕೋವಿದೇನ ದಾಸತಾ ನ ಭಜ್ಯತೇ । (ಕರ್ಮಣಿ).



**ಅವತಾರಿಕಾ** — ಈಗ ಕವಿಗಳು ಈ ಗ್ರಂಥಪ್ರತಿಪಾದ್ಯರಾದ ಶ್ರೀರಾಘವೇಂದ್ರತೀರ್ಥರ ಪರಮಗುರು-ಗಳಾದ ಅರವತ್ತುನಾಲ್ಕು (64) ಕಲೆಗಳಲ್ಲಿ ಪ್ರವೀಣರಾದ ಶ್ರೀವಿಜಯೀಂದ್ರತೀರ್ಥಯತಿರಾಜರ ಅನುಗ್ರಹವು ಆವಶ್ಯಕವಾದುದರಿಂದ, ಆ ಮಹಾನುಭಾವರಿಗೆ ವಂದನೆಗಳನ್ನು ಅರ್ಪಿಸುತ್ತಿದ್ದಾರೆ.

**ಚತುಷ್ಷಷ್ಟಿಕಲಾವಿದ್ಯಾಜುಷೇ ವಿದ್ವ[1]ನ್ಮಹೋಮುಷೇ ।**
**ಜಯೀಂದ್ರಜ್ಯೋತಿಷೇ ಕುರ್ಯಾಂ ವಂದನಾನಿ ಯಶೋಜುಷೇ ॥ 9 ॥**

**ಪದಚ್ಛೇದ** — ಚತುಃಷಷ್ಟಿಕಲಾವಿದ್ಯಾಜುಷೇ, ವಿದ್ವನ್ಮಹೋಮುಷೇ, (ವಿದ್ಯುನ್ಮಹೋಜುಷೇ) ಜಯೀಂದ್ರ-ಜ್ಯೋತಿಷೇ, ಕುರ್ಯಾಂ, ವಂದನಾನಿ, ಯಶೋಜುಷೇ ।

**ಅನ್ವಯ** — (ಅಹಂ) ಚತುಃಷಷ್ಟಿಕಲಾವಿದ್ಯಾಜುಷೇ ವಿದ್ವನ್ಮಹೋಮುಷೇ (ವಿದ್ಯುನ್ಮಹೋಜುಷೇ) ಯಶೋಜುಷೇ ಜಯೀಂದ್ರಜ್ಯೋತಿಷೇ ವಂದನಾನಿ ಕುರ್ಯಾಮ್ ।

**ಅನ್ವಯಾರ್ಥ** —

**ಚತುಃಷಷ್ಟಿಕಲಾವಿದ್ಯಾಜುಷೇ, ಚತುಃಷಷ್ಟಿ** = ಅರವತ್ತನಾಲ್ಕು (64), **ಕಲಾ** = ಕಲೆಗಳೆಂಬ, **ವಿದ್ಯಾ** = ವಿದ್ಯೆಗಳನ್ನು , **ಜುಷೇ** = ಹೊಂದಿರುವ,

1. 'ವಿದ್ಯುನ್ಮಹೋಜುಷೇ' ಎಂದು ಗುರುಪಾದಸೇವಾವ್ಯಾಖ್ಯಾನುಸಾರಿ ಪಾಠ.)

**ವಿದ್ವನ್ಮಹೋಮುಷೇ — ವಿದ್ವತ್** = ಪ್ರತಿವಾದಿ ವಿದ್ವಾಂಸರ, **ಮಹಃ** = ತೇಜಸ್ಸನ್ನು , **ಮುಷೇ** = ಅಪಹರಿಸುವ, (ಪಾಠಾಂತರ : ವಿದ್ಯುನ್ಮಹೋಜುಷೇ, ವಿದ್ಯುತ್ = ಮಿಂಚಿನ, ಮಹಃ = ತೇಜಸ್ಸನ್ನು , ಜುಷೇ = ಹೊಂದಿರುವ, ವಿದ್ಯುನ್ಮಹೋಮುಷೇ ಎಂಬ ಪಾಠವಿದ್ದರೆ, ಮಿಂಚಿನ ತೇಜಸ್ಸನ್ನು ಅಪಹರಿಸುವ)

**ಯಶೋಜುಷೇ** = ಕೀರ್ತಿಯನ್ನು ಹೊಂದಿರುವ

**ಜಯೀಂದ್ರಜ್ಯೋತಿಷೇ** = ಶ್ರೀವಿಜಯೀಂದ್ರತೀರ್ಥರೆಂಬ ಜ್ಞಾನಪ್ರಕಾಶಾತ್ಮಕವಾದ ಬೆಳಕಿಗೆ, (ವಿಜಯೀಂದ್ರರೆಂಬ ತಪಸ್ಸಿನಿಂದ ಬೆಳಗುವ ತೇಜಸ್ಸಿಗೆ )

**ವಂದನಾನಿ** = ನಮಸ್ಕಾರಗಳನ್ನು (ಸ್ತುತಿಗಳನ್ನು)

**ಕುರ್ಯಾಂ** = ಆವಶ್ಯಕವಾಗಿ ಮಾಡಿಯೇನು. (ಮಾಡಿಯೇ ಮಾಡಬೇಕಾಗಿದೆ).

**ತಾತ್ಪರ್ಯ** — ಶ್ರೀಮದ್ವಿಜಯೀಂದ್ರತೀರ್ಥ ಶ್ರೀಪಾದಂಗಳವರು ಶ್ರೀವ್ಯಾಸರಾಜರ ವಿದ್ಯಾಶಿಷ್ಯರು. ಅವರಿಂದ ಎಲ್ಲಾ ವಿದ್ಯೆಗಳನ್ನು ಅರವತ್ತನಾಲ್ಕು ಕಲೆಗಳನ್ನೂ ಉಪದೇಶದ ಮೂಲಕ ಪಡೆದಿದ್ದರು. 64 ಕಲಾಪೂರ್ಣರಾದ ಅವರ ಎದುರು ಪ್ರತಿವಾದಿ ವಿದ್ವಾಂಸರು ಕಲಾಹೀನರಾಗುತ್ತಿದ್ದರು. ಮಿಂಚಿನಂತಹ ಪ್ರಕಾಶವನ್ನು ಹೊಂದಿ ವಸ್ತುಸ್ಥಿತಿಯಲ್ಲಿ ಚಂಚಲವಾದ ಮಿಂಚಿನ ಪ್ರಕಾಶದ ಗೊಂಚಲನ್ನೂ ಅಚಂಚಲವಾದ ತಮ್ಮ ತೇಜಸ್ಸಿನಿಂದ ಪರಾಭವಗೊಳಿಸಿ ತ್ರಿಭುವನ ವ್ಯಾಪಿಯಾದ, ಆಚಂದ್ರಾರ್ಕವಾದ ಕೀರ್ತಿಯಿಂದ ಕಂಗೊಳಿಸುತ್ತಿದ್ದಾರೆ. ಜ್ಞಾನಪ್ರಕಾಶವೇ ಮೂರ್ತಿವೆತ್ತಂತಿರುವ, ತಪಸ್ಸಿನ ತೇಜಸ್ಸಿನಿಂದ ದೇದೀಪ್ಯಮಾನರಾದ ಅಂತಹ ವಿಜಯೀಂದ್ರರೆಂಬ ಜ್ಯೋತಿಸ್ಸನ್ನು ನಾವು ಸಾವಿರಾರು ವಿಧದಿಂದ ಸ್ತುತಿಸಿ, ಅವರಿಗೆ ಸಾವಿರಾರು ನಮನಗಳನ್ನು ಅರ್ಪಿಸುತ್ತೇವೆ.

**ವಿಗ್ರಹ—**

**ಚತುಷ್ಷಷ್ಟಿಕಲಾವಿದ್ಯಾಜುಷೇ—** ಚತುರಧಿಕಾ ಷಷ್ಟಿಃ ಚತುಃಷಷ್ಟಿಃ, ಚತುಃಷಷ್ಟಿಶ್ಚ (ಸಂಖ್ಯೋಪೇತಾಶ್ಚ ತಾಃ) ತಾಃ ಕಲಾಶ್ಚ ಚತುಷ್ಷಷ್ಟಿಕಲಾಃ, ಚತುಷ್ಷಷ್ಟಿಕಲಾ ಇತಿ ವಿದ್ಯಾಃ ಚತುಷ್ಷಷ್ಟಿಕಲಾವಿದ್ಯಾಃ, ತಾಃ ಜುಷತೇ ಇತಿ ಚತುಷ್ಷಷ್ಟಿಕಲಾವಿದ್ಯಾಜುಟ್, (ಜುಷೀ ಜುಂಷಿ) ತಸ್ಮೈ.

**ವಿದ್ವನ್ಮಹೋಜುಷೇ—** ವಿದುಷಾಂ ಮಹಃ ವಿದ್ವನ್ಮಹಃ, ವಿದ್ವನ್ಮಹಃ ಮುಷ್ಣಾತೀತಿ ವಿದ್ವನ್ಮಹೋಮುಟ್ (ಮುಷೀ ಮುಂಷಿ) ತಸ್ಮೈ ವಿದ್ಯುತಾಂ ಮಹಃ ಜುಷತೇ, ಮುಷ್ಣಾತೀತಿ ವಾ ವಿದ್ಯುನ್ಮಹೋ-ಜುಟ್, ವಿದ್ಯುನ್ಮಹೋಮುಟ್ ಇತಿ ವಾ) ।

**ಜಯೀಂದ್ರಜ್ಯೋತಿಷೇ—** ಜಯೀಂದ್ರ ಇತಿ ಜ್ಯೋತಿಃ = ಜಯೀಂದ್ರಜ್ಯೋತಿಃ, ತಸ್ಮೈ ।

**ಯಶೋಜುಷೇ—** ಯಶಃ ಜುಷತೇ ಇತಿ = ಯಶೋಜುಟ್ ತಸ್ಮೈ ।

**ಕ್ರಿಯಾಪದ** — ಕುರ್ಯಾತ್, ಕುರ್ಯಾತಾಂ, ಕುರ್ಯುಃ । ಕುರ್ಯಾಃ, ಕುರ್ಯಾತಂ, ಕುರ್ಯಾತ । ಕುರ್ಯಾಂ, ಕುರ್ಯಾವ, ಕುರ್ಯಾಮ । ಕರಣಾರ್ಥಕಾತ್ ಕೃಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ವಿಧಿಲಿಙ್ ಉತ್ತಮ ಪು.ಏ. ಕುರ್ಯಾತ್ ಇತಿ ರೂಪಮ್ ।

**ಪ್ರಯೋಗ—** ಅಹಂ ಜಯೀಂದ್ರಜ್ಯೋತಿಷೇ ವಂದನಾನಿ ಕುರ್ಯಾಮ್ । (ಕರ್ತರಿ).

ಮಯಾ ಜಯೀಂದ್ರಜ್ಯೋತಿಷೇ ವಂದನಾನಿ ಕ್ರಿಯೇರನ್ । (ಕರ್ಮಣಿ).

**ವಿಶೇಷಾಂಶ** — ಇಲ್ಲಿ ಬಾಲಬೋಧಿನೀ ಮತ್ತು ಗುರುಪಾದಸೇವಾ ಎರಡು ವ್ಯಾಖ್ಯಾನಗಳಲ್ಲಿಯೂ ಜುಷತೀತಿ ಜುಟ್ ಎಂದು ವಿಗ್ರಹ ತೋರಿಸಿದ್ದಾರೆ. ಜುಷಧಾತುವು ತುದಾದಿ ಆತ್ಮನೇಪದಿ ಆದರೂ 'ಚಾಂದ್ರಾ-ದಯಸ್ತು ಮನ್ಯಂತೇ ಸರ್ವಸ್ಮಾಮುಭಯಂ ಪದಂ' ಎಂಬ ವಚನದಂತೆ ಪರಸ್ಮೈಪದ ಪ್ರಯೋಗ ಮಾಡಿದ್ದಾರೆಂದು ತಿಳಿಯಬೇಕು.



**ಅವತಾರಿಕಾ** — ಈಗ ಈ ಮಹಾಕಾವ್ಯಕರ್ತೃಗಳಾದ ನಾರಾಯಣಾಚಾರ್ಯರು ಪ್ರಕೃತ ಕಾವ್ಯದ ನಾಯಕರಾದ ಶ್ರೀರಾಘವೇಂದ್ರಗುರುರಾಜರ ಸಾಕ್ಷಾತ್ ಗುರುಗಳೂ ಗದ್ಯಪದ್ಯಾತ್ಮಕವಾದ ಪ್ರಬಂಧಗಳ ರಚನೆ ಮಾಡಿದವರೂ ಆದ ಶ್ರೀಸುಧೀಂದ್ರತೀರ್ಥಶ್ರೀಪಾದಂಗಳವರನ್ನು ಅವರ ಅನುಗ್ರಹಕ್ಕಾಗಿ ಸೇವಿಸುತ್ತಿದ್ದಾರೆ. (ನಮಸ್ಕರಿಸುತ್ತಾರೆ).

**ಸುಧೀಂದ್ರಯೋಗಿನಂ ಸೇವೇ ಸಾಧುಸಾತ್ಕೃತಸಂಪದಮ್ ।**
**ಸಗದ್ಯಪದ್ಯನಿರ್ಮಾಣವಿದ್ಯಾಯಾಃ ಪರಮಂ [1]ಪದಮ್ ॥ 10 ॥**

**ಪದಚ್ಛೇದ** — ಸುಧೀಂದ್ರಯೋಗಿನಂ, ಸೇವೇ, ಸಾಧುಸಾತ್ಕೃತಸಂಪದಂ, ಸಗದ್ಯಪದ್ಯನಿರ್ಮಾಣ-ವಿದ್ಯಾಯಾಃ, ಪರಮಂ (ಪ್ರಥಮಂ), ಪದಮ್ ।

**ಅನ್ವಯ** — ಸಾಧುಸಾತ್ಕೃತಸಂಪದಂ ಸಗದ್ಯಪದ್ಯನಿರ್ಮಾಣವಿದ್ಯಾಯಾಃ ಪರಮಂ (ಪ್ರಥಮಂ) ಪದಂ ಸುಧೀಂದ್ರಯೋಗಿನಂ ಸೇವೇ ।

**ಅನ್ವಯಾರ್ಥ** —

(**ಅಹಂ** = ನಾನು)

**ಸಾಧುಸಾತ್ಕೃತಸಂಪದಂ** = ಸಜ್ಜನರ ಅಧೀನವಾಗಿ ಮಾಡಲ್ಪಟ್ಟ (ಸಜ್ಜನರಲ್ಲಿ ವಿನಿಯೋಗಿಸಲ್ಪಟ್ಟ) ಧನಾದಿ ಸಂಪತ್ತುಳ್ಳ

**ಸಗದ್ಯಪದ್ಯ** = ಗದ್ಯಪದ್ಯಗಳಿಂದ ಸಹಿತವಾದ,

**ನಿರ್ಮಾಣವಿದ್ಯಾಯಾಃ** = ಗ್ರಂಥಕರಣ ಸಾಮರ್ಥ್ಯಕ್ಕೆ

(ಅಥವಾ **ಸಗದ್ಯಪದ್ಯನಿರ್ಮಾಣ** = ಗದ್ಯಪದ್ಯಗಳಿಂದ ಸಹಿತವಾದ ನಿರ್ಮಾಣವುಳ್ಳ **ವಿದ್ಯಾಯಾಃ** = ಪ್ರಬಂಧರೂಪವಾದ ವಿದ್ಯೆಗೆ) **ಪ್ರಥಮಂ ಪದಂ** = ಮೊದಲನೆಯ ಸ್ಥಾನವಾಗಿರುವ (**ಪರಮಂ ಪದಂ** = ಮುಖ್ಯ ಉತ್ಪತ್ತಿ ಸ್ಥಾನವಾಗಿರುವ)

**ಸುಧೀಂದ್ರಯೋಗಿನಂ** = ಶ್ರೀಸುಧೀಂದ್ರತೀರ್ಥಶ್ರೀಪಾದಂಗಳವರನ್ನು

**ಸೇವೇ** = ಸೇವಿಸುತ್ತೇನೆ. (ಭಜಿಸುತ್ತೇನೆ).

**ತಾತ್ಪರ್ಯ** — ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರು ಶ್ರೀಮೂಲರಾಮಚಂದ್ರನ ಸೇವೆಗಾಗಿ ಬಂದಿರುವ ಸಂಪತ್ತನ್ನು ಭಕ್ತರಾದ ಜನರಿಗೆ ಪರಮಾತ್ಮನ ಪ್ರಸಾದವೆಂದು ಅದನ್ನು ಹಂಚಿಕೊಟ್ಟಿರುತ್ತಾರೆ. ವಿದ್ಯಾಸಂಪತ್ತನ್ನು ಕೂಡ ಶಿಷ್ಯರಿಗೆ ಪ್ರವಚನ ಮಾಡಿ ಹಂಚಿಕೊಟ್ಟಿರುತ್ತಾರೆ. ವ್ಯಾಸರಾಜಾಭ್ಯುದಯ ವೈರಾಗ್ಯತರಂಗಾದಿ ಕಾವ್ಯಗಳು,

1'ಪ್ರಥಮಂ ಪದಂ' ಪಾಠಾಂತರ ಗು. ಸೇ.

ವಿಜಯೀಂದ್ರ ಗದ್ಯ ಮುಂತಾದ ಗದ್ಯಗಳು, ಸುಭದ್ರಾಪರಿಣಯ ಮುಂತಾದ ನಾಟಕಗಳು, ಅಲಂಕಾರ ಮಂಜರೀ, ಸಾಹಿತ್ಯಸಾಮ್ರಾಜ್ಯ ಮುಂತಾದ ಸೋದಾಹರಣ ಅಲಂಕಾರ ಶಾಸ್ತ್ರಗ್ರಂಥಗಳು, ಶಾಸ್ತ್ರೀಯ ಟಿಪ್ಪಣೀ ಗ್ರಂಥಗಳು ಮುಂತಾದ ಪ್ರೌಢಪ್ರಬಂಧನಿರ್ಮಾಣ ಚಾತುರ್ಯದಲ್ಲಿ ಮೊದಲನೆಯ ಸ್ಥಾನವನ್ನು ಪಡೆದಿರುತ್ತಾರೆ. ಇಂತಹ ಟಿಪ್ಪಣೀ ಗ್ರಂಥಗಳು ಮುಂತಾದ ಪ್ರೌಢಪ್ರಬಂಧನಿರ್ಮಾಣ ಚಾತುರ್ಯದಲ್ಲಿ ಮೊದಲನೆಯ ಸ್ಥಾನವನ್ನು ಪಡೆದಿರುತ್ತಾರೆ. ಇಂತಹ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರನ್ನು ನಾನು ಸೇವಿಸುತ್ತೇನೆ. (ಭಕ್ತಿಪೂರ್ವಕವಾಗಿ ಭಜಿಸುತ್ತೇನೆ.)

ವಿಗ್ರಹ—

**ಸುಧೀಂದ್ರಯೋಗಿನೇ—** ಸುಧೀಂದ್ರಃ ಇತಿ ಯೋಗೀ ಸುಧೀಂದ್ರಯೋಗೀ ತಂ ।

**ಸಾಧುಸಾತ್ಕೃತಸಂಪದಂ—** ಸಾಧೂನಾಂ ಅಧೀನಾಃ ಕೃತಾಃ ಸಾಧುಸಾತ್ಕೃತಾಃ, ಸಾಧುಸಾತ್ಕೃತಾಃ ಸಂಪದಃ ಯೇನ ಸಃ ಸಾಧುಸಾತ್ಕೃತಸಂಪತ್ ತಮ್ ।

**ಸಗದ್ಯಪದ್ಯನಿರ್ಮಾಣವಿದ್ಯಾಯಾಃ—** ಗದ್ಯಾನಿ ಚ ಪದ್ಯಾನಿ ಚ ಗದ್ಯಪದ್ಯಾನಿ, ಗದ್ಯಪದ್ಯೈಃ ಸಹ ವರ್ತತೇ ಇತಿ ಸಗದ್ಯಪದ್ಯಂ, ಸಗದ್ಯಪದ್ಯಂ ನಿರ್ಮಾಣಂ ಯಸ್ಯಾಃ ಸಾ ಸಗದ್ಯಪದ್ಯನಿರ್ಮಾಣಾ, ಸಗದ್ಯಪದ್ಯನಿರ್ಮಾಣಾ ಚ ಸಾ ವಿದ್ಯಾ ಚ ಸಾ ಸಗದ್ಯಪದ್ಯನಿರ್ಮಾಣವಿದ್ಯಾ, ತಸ್ಯಾಃ ಸಗದ್ಯ-ಪದ್ಯನಿರ್ಮಾಣವಿದ್ಯಾಯಾಃ ।

(ಅಥವಾ— ಗದ್ಯಂ ಚ ಪದ್ಯಂ ಚ ಗದ್ಯಪದ್ಯೇ, ಗದ್ಯಪದ್ಯಾಭ್ಯಾಂ ಸಹ ವರ್ತತೇ ಇತಿ ಸಗದ್ಯಪದ್ಯಾ, ನಿರ್ಮಾಣಸ್ಯ ವಿದ್ಯಾ ನಿರ್ಮಾಣವಿದ್ಯಾ, ಸಗದ್ಯಪದ್ಯಾ ಚ ಸಾ ನಿರ್ಮಾಣವಿದ್ಯಾ ಚ ಸಗದ್ಯಪದ್ಯನಿರ್ಮಾಣವಿದ್ಯಾ, ತಸ್ಯಾಃ) ।

**ವ್ಯಾಕರಣವಿಶೇಷ** — ಸಾಧುಸಾತ್ಕೃತಸಂಪದಂ ಎಂಬಲ್ಲಿ ಸಾಧೂನಾಂ ಅಧೀನಾಃ ಕೃತಾಃ = ಸಾಧುಸಾತ್ಕೃತಾಃ ಎಂಬ ಅಸ್ವಪದ ವಿಗ್ರಹವನ್ನು ಮಾಡಬೇಕು. 'ದೇಯೇತ್ರಾ ಚ' (5.4.55) 'ತದಧೀನೇ ದೇಯೇತ್ರಾ ಸ್ಯಾತ್ ಸಾತಿಶ್ಚ' ಕೊಡಲ್ಪಡುವ ವಸ್ತುವು ಒಬ್ಬರ ಅಧೀನವಾಯಿತು ಎಂಬ ಅರ್ಥದಲ್ಲಿ ಸಾತಿ ಪ್ರತ್ಯಯ ಬಂದಿದೆ.

**ಪ್ರಯೋಗ—** ಅಹಂ ಸುಧೀಂದ್ರಯೋಗಿನಂ ಸೇವೇ । (ಕರ್ತರಿ).

ಮಯಾ ಸುಧೀಂದ್ರಯೋಗೀಃ ಸೇವ್ಯತೇ । (ಕರ್ಮಣಿ).

**ಅಲಂಕಾರ** — ಇಲ್ಲಿ ಉದಾತ್ತಾಲಂಕಾರವಿದೆ. ಶ್ರೀಸುಧೀಂದ್ರತೀರ್ಥರು ಗದ್ಯಪದ್ಯಾದಿ ಪ್ರಬಂಧನಿರ್ಮಾಣ ಮಾಡುವುದರಲ್ಲಿ ಸಮರ್ಥರೆಂದೂ ಸಂಪತ್ತನ್ನು ಸಜ್ಜನರಿಗೆ ಹಂಚಿಕೊಟ್ಟಿರುವರೆಂದೂ ಅವರ ಉನ್ನತ ಮಟ್ಟದ ನಡವಳಿಕೆಯನ್ನು ವರ್ಣಿಸಿರುವುದರಿಂದ ಇದು ಉದಾತ್ತಚರಿತ ವರ್ಣನರೂಪವಾದ ಉದಾತ್ತಾಲಂಕಾರವಾಯಿತು.

**ಲಕ್ಷಣ** — ಉದಾತ್ತಮೃದ್ಧಿಶ್ಚರಿತಂ ಶ್ಲಾಘ್ಯಂ ಚಾನ್ಯೋಪಲಕ್ಷಣಮ್ ।
ಉದಾತ್ತಮೃದ್ಧಿರ್ಮೋದಾತ್ತಚರಿತಂ ವಾನ್ಯಬೋಧಕಮ್ ॥ (ಚಂದ್ರಾಲೋಕ)

**ಉದಾ.** — ರಾಜನ್ಯರಾಜತ್ ಕೋಟೀರಮಣಿ ನೀರಾಜಿತೋ ಮುನಿಃ ॥

(ಅಲಂಕಾರ ಮಂಜರಿ)



**ಅವತಾರಿಕಾ** — ಈಗ ಕವಿಗಳು ತಾವು ನಿರ್ಮಿಸುತ್ತಿರುವ ಕಾವ್ಯದಲ್ಲಿ ಪ್ರತಿಪಾದ್ಯನಾಯಕರಾದ ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರ ಪರಮಾನುಗ್ರಹವು ಆವಶ್ಯಕವಾದುದರಿಂದ ಅವರಲ್ಲಿ ಅತಿಶಯ ಭಕ್ತಿಯಿಂದ ಮುಂದಿನ ಮೂರು ಶ್ಲೋಕಗಳಿಂದ ಅವರನ್ನು ನಮಸ್ಕರಿಸುತ್ತಾರೆ ಮತ್ತು ಸ್ತುತಿಸುತ್ತಾರೆ—

**ಶ್ರೀಮತೋ ರಾಘವೇಂದ್ರಸ್ಯ ನಮಾಮಿ ಪದಪಂಕಜೇ ।**
**ಕಾಮಿತಾಶೇಷಕಲ್ಯಾಣಕಲನಾಕಲ್ಪಪಾದಪೌ ॥ 11 ॥**

**ಪದಚ್ಛೇದ** — ಶ್ರೀಮತಃ, ರಾಘವೇಂದ್ರಸ್ಯ, ನಮಾಮಿ, ಪದಪಂಕಜೇ, ಕಾಮೀತಾಶೇಷಕಲ್ಯಾಣಕಲನಾ-ಕಲ್ಪಪಾದಪೌ ।

**ಅನ್ವಯ**—ಶ್ರೀಮತಃ ರಾಘವೇಂದ್ರಸ್ಯ ಕಾಮಿತಾಶೇಷಕಲ್ಯಾಣಕಲನಾಕಲ್ಪಪಾದಪೌ ಪದಪಂಕಜೇ ನಮಾಮಿ ।

**ಅನ್ವಯಾರ್ಥ** —

**ಶ್ರೀಮತಃ** = ಜ್ಞಾನ ಭಕ್ತ್ಯಾದಿ ಸಂಪದ್ಯುಕ್ತರಾದ,

**ರಾಘವೇಂದ್ರಸ್ಯ** = ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರ,

**ಕಾಮಿತಾಶೇಷಕಲ್ಯಾಣಕಲನಾಕಲ್ಪಪಾದಪೌ** — **ಕಾಮಿತ** = ಅಪೇಕ್ಷಿತವಾದ, **ಅಶೇಷ** = ಸಮಗ್ರ-ವಾದ, **ಕಲ್ಯಾಣ** = ವಿವಾಹ, ಸಂತಾನ, ಪರಿಶುದ್ಧಭಕ್ತಿ, ವಿಜ್ಞಾನ, ವಾಕ್ಕು ಮುಂತಾದ ಮಾಂಗಲ್ಯ ಸಮೃದ್ಧಿಗಳ, **ಕಲನಾ** = ಕೊಡುವುದರಲ್ಲಿ, **ಕಲ್ಪಪಾದಪೌ** = ಕಲ್ಪವೃಕ್ಷಗಳಂತೆ ಇರುವ,

**ಪದಪಂಕಜೇ** = ಕಮಲಗಳಂತೆ ಇರುವ ಪಾದಯುಗಳವನ್ನು

**ನಮಾಮಿ** = ನಮಸ್ಕರಿಸುತ್ತೇನೆ.

**ತಾತ್ಪರ್ಯ** — ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು ಜ್ಞಾನ, ಭಕ್ತಿ, ವೈರಾಗ್ಯ, ಮುಂತಾದ ಕಲ್ಯಾಣಗುಣಶಾಲಿಗಳು, ಅರಳಿದ ತಾವರೆ ಹೂವುಗಳಂತಿರುವ ಅವರ ಪಾದದ್ವಯವು ಭಕ್ತರು ಅಪೇಕ್ಷಿಸಿದ ವಿವಾಹ, ಸತ್ಪುತ್ರಸೌಭಾಗ್ಯ, ಪರಿಶುದ್ಧವಾದ ಭಕ್ತಿ, ಉತ್ತಮ ಜ್ಞಾನ, ವಾಕ್ಪಾಟವ, ದೇಹಾರೋಗ್ಯ ಮುಂತಾದ ಎಲ್ಲಾ ಮಾಂಗಲ್ಯ ಪೂರ್ಣವಾದ ಫಲಗಳನ್ನು ಕೊಡುವುದರಲ್ಲಿ ಕಲ್ಪವೃಕ್ಷಗಳಿಗೆ ಸಮಾನವಾಗಿದೆ. ನಾನು ಅಂತಹ ಚರಣ- ಕಮಲಗಳನ್ನು ಭಕ್ತ್ಯತಿಶಯದಿಂದ ನಮಿಸುತ್ತೇನೆ. (ಭಜತಾಂ ಕಲ್ಪವೃಕ್ಷಾಯ ಎಂದು ಹೇಳಿರುವಂತೆ ಅವರು ಭಕ್ತರಿಗೆ ಕಲ್ಪವೃಕ್ಷದಂತೆ ಅಭೀಷ್ಟಪ್ರದರು ಎಂಬುದು ಭಕ್ತರಿಗೆ ಅನುಭವಸಿದ್ಧವಾಗಿದೆ.)

**ವಿಗ್ರಹ** —

**ಶ್ರೀಮತಃ** — ಶ್ರೀಃ ಅಸ್ಯ ಅಸ್ತೀತಿ ಶ್ರೀಮಾನ್, ತಸ್ಯ ಶ್ರೀಮತಃ ।

**ಪದಪಂಕಜೇ** — ಪದೇ ಪಂಕಜೇ ಇವ ಪದಪಂಕಜೇ, ತೇ । (ದ್ವಿತೀಯಾ ದ್ವಿವಚನಾಂತ ನಪುಂಸಕಲಿಂಗ ವಿಶೇಷ್ಯಪದ)

**ಕಾಮಿತಾಶೇಷಕಲ್ಯಾಣಕಲನಾಕಲ್ಪಪಾದಪೌ** — ಅಶೇಷಾಣಿ ಚ ತಾನಿ ಕಲ್ಯಾಣಾನಿ ಚ ಅಶೇಷ-ಕಲ್ಯಾಣಾನಿ, ಕಾಮಿತಾನಿ ಚ ತಾನಿ ಅಶೇಷಕಲ್ಯಾಣಾನಿ ಚ, ಕಾಮಿತಾಶೇಷಕಲ್ಯಾಣಾನಿ, ಕಾಮಿತಾಶೇಷಕಲ್ಯಾಣಾನಾಂ ಕಲನಾ ಕಾಮಿತಾಶೇಷಕಲ್ಯಾಣಕಲನಾ, ಕಲ್ಪೇತೇ ಇತಿ ಕಲ್ಪೌ, ಕಲ್ಪೌ

ಚ ತೌ ಪಾದಪೌ ಚ ಕಲ್ಪಪಾದಪೌ, ಕಾಮಿತಾಶೇಷಕಲ್ಯಾಣಕಲನಾಯಾಂ ಕಲ್ಪಪಾದಪೌ ಕಾಮಿತಾಶೇಷಕಲ್ಯಾಣಕಲನಾಕಲ್ಪಪಾದಪೌ, ತೌ । (ಇದು ದ್ವಿತೀಯಾ ದ್ವಿವಚನಾಂತ ಪುಲ್ಲಿಂಗಪದ)

**ವ್ಯಾಕರಣವಿಶೇಷ** –— 'ಪದಪಂಕಜೇ' 'ಉಪಮಿತಂ ವ್ಯಾಘ್ರಾದಿಭಿಃ ಸಾಮಾನ್ಯಪ್ರಯೋಗೇ (2.1.56) ಎಂಬ ಸೂತ್ರದಿಂದ ಉಪಮಿತಸಮಾಸ, ಉಪಮಾನೋತ್ತರಪದಕರ್ಮಧಾರಯ ಸಮಾಸವಾಗಿದೆ. ಇಲ್ಲಿ ಪದ-ಪಂಕಜೇ ಎಂಬುದು ನಪುಂಸಕಲಿಂಗ, ವಿಶೇಷ್ಯ, ಕಲ್ಪಪಾದಪೌ ಎಂಬುದು ಪುಲ್ಲಿಂಗವಿಶೇಷಣ. ''ಯಲ್ಲಿಂಗಂ ಯದ್ವಚನಂ ಯಾ ಚ ವಿಭಕ್ತಿಃ ವಿಶೇಷ್ಯಸ್ಯ, ತಲ್ಲಿಂಗಂ ತದ್ವಚನಂ ಸೈವ ವಿಭಕ್ತಿಃ ವಿಶೇಷಣಸ್ಯಾಪಿ'' ಎಂಬ ನಿಯಮದಂತೆ ವಿಶೇಷ್ಯವಿಶೇಷಣಗಳಿಗೆ ಸಮಾನಲಿಂಗತ್ವವು ಇರಬೇಕು. ಇಲ್ಲಿ ಹಾಗಿಲ್ಲದಿರುವುದರಿಂದ ಈ ಎರಡು ಪದಗಳಿಗೆ ವಿಶೇಷ್ಯವಿಶೇಷಣಭಾವವು ಹೇಗೆ ? ಎಂಬ ಸಂದೇಹಕ್ಕೆ ಬಾಲಬೋಧಿನೀಕಾರರು ಹೀಗೆ ಉತ್ತರ ಕೊಡುತ್ತಾರೆ. 'ಅತ್ರ ನಿತ್ಯಲಿಂಗತ್ವಾತ್ ವಿಶೇಷಣವಿಶೇಷ್ಯಭಾವಃ' ಅಂದರೆ ವಿಶೇಷಣವಿಶೇಷ್ಯಗಳು ಕೋಶಾನುಸಾರ-ವಾಗಿ ನಿಯತಲಿಂಗವಾಗಿ. ಅಂದರೆ ನಪುಂಸಕ ಪುಲ್ಲಿಂಗ ಸ್ತ್ರೀಲಿಂಗ ಎಂಬ ಒಂದೊಂದೇ ಲಿಂಗದಲ್ಲಿ ಇದ್ದರೆ ಸಮಾನಲಿಂಗತ್ವವಿಲ್ಲದಿದ್ದರೂ ಅವುಗಳಿಗೆ ವಿಶೇಷಣವಿಶೇಷ್ಯಭಾವವು ಕೂಡಬಹುದು. 'ಪಂಕಜ' ಶಬ್ದವು 'ಪಂಕೇರುಹಂ ತಾಮರಸಂ ಸಾರಸಂ ಸರಸೀರುಹಮ್' ಎಂಬ ಅಮರಕೋಶಾನುಸಾರ ನಿತ್ಯನಪುಂಸಕಲಿಂಗ, ವೃಕ್ಷೋ ಮಹೀರುಹಃ ಶಾಖೀ ವಿಟಪೀಪಾದಪಸ್ತರುಃ (ಅಮರ) ಎಂಬ ಕೋಶಾನುಸಾರ ಪಾದಪ ಶಬ್ದವು ಪುಲ್ಲಿಂಗ ಆದ್ದರಿಂದ ಅವುಗಳಿಗೆ ವಿಶೇಷಣವಿಶೇಷ್ಯಭಾವವು ಕೂಡಬಹುದು. 'ವ್ಯಾಪ್ತಿರ್ಯಸ್ಯ ನಿಜೇ ನಿಜೇನ ಮಹಸಾ .... ಶುದ್ಧಂ ಪ್ರಮಾಣಂ ಸ ಮೇ। ಭೂಯಾತ್ ತತ್ತ್ವವಿನಿರ್ಣಯಾಯ ಭಗವಾನ್ ಆನಂದತೀರ್ಥೋ ಮುನಿಃ' ಎಂದು ನ್ಯಾಯಸುಧಾ ಗ್ರಂಥದಲ್ಲಿ ಇರುವಂತೆ ಎಂದು ತಿಳಿಯಬೇಕು.

ಟೀಕಾಕೃತ್ಪಾದರೂ ಹೀಗೆಯೇ ಪ್ರಯೋಗಿಸಿದ್ದಾರೆ.

**ಕ್ರಿಯಾಪದ** — ಣಮುಪ್ರಹ್ವರ್ಥೇ ಶಬ್ದೇ ಚ ಇತ್ಯಸ್ಮಾದ್ ಧಾತೋಃ ಪ್ರಹ್ವರ್ಥಶಬ್ದಾರ್ಥಕಾತ್ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವರ್ತಮಾನೇ ಲಟ್ ಉತ್ತಮಪುರುಷೇ ಏಕವಚನೇ 'ನಮಾಮಿ' ಇತಿ ರೂಪಮ್. ।

ನಮತಿ, ನಮತಃ, ನಮಂತಿ ।

ನಮಸಿ, ನಮಥಃ, ನಮಥ ।

ನಮಾಮಿ, ನಮಾವಃ, ನಮಾಮಃ ।

**ಪ್ರಯೋಗ** — ಅಹಂ ರಾಘವೇಂದ್ರಸ್ಯ ಪದಪಂಕಜೇ ನಮಾಮಿ । (ಕರ್ತರಿ).

ಮಯಾ ರಾಘವೇಂದ್ರಸ್ಯ ಪದಪಂಕಜೇ ನಮ್ಯೇತೇ । (ಕರ್ಮಣೀ).

**ಅಲಂಕಾರ** — 'ಪದಪಂಕಜೇ' ಎಂಬಲ್ಲಿ ಸಮಾಸದಲ್ಲಿ ಉಪಮಾವಾಚಕವಾದ ಇವಶಬ್ದಲೋಪವಾಗಿ-ರುವುದರಿಂದ ಧರ್ಮವನ್ನು ಹೇಳದಿರುವುದರಿಂದ 'ಧರ್ಮವಾಚಕಲುಪ್ತಾಲುಪ್ತೋಪಮಾ' ಅಲಂಕಾರ. 'ಕಾಮಿತಾ-ಶೇಷಕಲ್ಯಾಣಕಲನಾಕಲ್ಪಪಾದಪೌ ಪದಪಂಕಜೇ' ಎಂದು ಅತ್ಯಂತ ಭೇದವುಳ್ಳ ಕಲ್ಪಪಾದಪಕ್ಕೂ ಪದಪಂಕಜಗಳಿಗೂ ಅಭೇದವನ್ನು ಹೇಳಿದ್ದರಿಂದ ರೂಪಕಾಲಂಕಾರವಾಗುತ್ತದೆ. ಇವೆರಡರ ಲಕ್ಷಣ ಉದಾಹರಣೆಗಳು ಹಿಂದೆಯೇ ಬಂದಿವೆ.

★ ★ ★

**ಅವತಾರಿಕಾ —** ಕವಿಗಳು ಪುನಃ ಶ್ರೀರಾಘವೇಂದ್ರಗುರುಗಳನ್ನು 'ಮುಹುಃ ಸ್ಮಾರಿತವಾಲ್ಮೀಕಿಂ' ಎಂಬ ಪದ್ಯದಿಂದ ಸ್ತುತಿಸುತ್ತಾರೆ—

**ಮುಹುಃ ಸ್ಮಾರಿತವಾಲ್ಮೀಕಿಂ ಪುನಸ್ತಂ ನೌಮಿ ದೇಶಿಕಮ್ ।**
**ಯೋ ವಿಸ್ತೀರ್ಣಾಂ ರಾಮಕಥಾಂ ಸ್ರಗ್ಧರಾಭಿಃ ಸಮಗ್ರಹೀತ್ ॥ 12 ॥**

**ಪದಚ್ಛೇದ —** ಮುಹುಃ, ಸ್ಮಾರಿತವಾಲ್ಮೀಕಿಂ, ಪುನಃ, ತಂ, ನೌಮಿ, ದೇಶಿಕಂ, ಯಃ, ವಿಸ್ತೀರ್ಣಾಂ, ರಾಮಕಥಾಂ, ಸ್ರಗ್ಧರಾಭಿಃ, ಸಮಗ್ರಹೀತ್ ।

**ಅನ್ವಯ —** ಯಃ ವಿಸ್ತೀರ್ಣಾಂ ರಾಮಕಥಾಂ ಸ್ರಗ್ಧರಾಭಿಃ ಸಮಗ್ರಹೀತ್ ಮುಹುಃ ಸ್ಮಾರಿತವಾಲ್ಮೀಕಿಂ ತಂ ದೇಶಿಕಂ ಪುನಃ ನೌಮಿ ।

**ಅನ್ವಯಾರ್ಥ —**

**ಯಃ** = ಯಾವ ರಾಘವೇಂದ್ರತೀರ್ಥ ಗುರುಸಾರ್ವಭೌಮರು,
**ವಿಸ್ತೀರ್ಣಾಂ** = (ಇಪ್ಪತ್ತನಾಲ್ಕು ಸಹಸ್ರಗ್ರಂಥಾತ್ಮಕವಾಗಿ) ಬಹಳ ವಿಸ್ತಾರವಾದ,
**ರಾಮಕಥಾಂ** = (ವಾಲ್ಮೀಕಿ ರಾಮಾಯಣ ಪ್ರತಿಪಾದ್ಯವಾದ) ಶ್ರೀರಾಮದೇವರ ಕಥೆಯನ್ನು
**ಸ್ರಗ್ಧರಾಭಿಃ** = ಸ್ರಗ್ಧರಾವೃತ್ತದ (ಹನ್ನೊಂದು ಶ್ಲೋಕಗಳಿಂದ),
**ಸಮಗ್ರಹೀತ್** = ('ಶ್ರೀರಾಮ ಚಾರಿತ್ರ್ಯ ಮಂಜರೀ' ಎಂಬ ಗ್ರಂಥದಲ್ಲಿ) ಸಂಗ್ರಹಿಸಿದರೋ,
**ಮುಹುಃ** = ಮತ್ತು ಮತ್ತು
**ಸ್ಮಾರಿತವಾಲ್ಮೀಕಿಂ** = ಸ್ಮರಣೆಗೆ ವಿಷಯವಾಗಿ ಮಾಡಲ್ಪಟ್ಟ ವಾಲ್ಮೀಕಿ ಮುನಿಗಳುಳ್ಳ
**ತಂ** = ಅಂತಹ,
**ದೇಶಿಕಂ** =ಗುರುಗಳನ್ನು
**ಪುನಃ** = ಮತ್ತು
**ನೌಮಿ** = ಸ್ತುತಿಸುತ್ತೇನೆ.

**ತಾತ್ಪರ್ಯ —** ಶ್ರೀರಾಘವೇಂದ್ರಗುರುವರ್ಯರು ಶ್ರೀರಾಮಚಾರಿತ್ರ್ಯಮಂಜರೀ ಎಂಬ ಗ್ರಂಥವನ್ನು ಬರೆದಿದ್ದಾರೆ. ವಾಲ್ಮೀಕಿ ಮಹರ್ಷಿಗಳು ಇಪ್ಪತ್ತನಾಲ್ಕು ಸಾವಿರ ಗ್ರಂಥಗಳಿಂದ (ಗ್ರಂಥವೆಂದರೆ 32 ಅಕ್ಷರಗಳು) ವರ್ಣಿಸಿರುವ ವಾಲ್ಮೀಕಿ ರಾಮಾಯಣ ಪ್ರತಿಪಾದ್ಯವಾದ ಕಥೆಯನ್ನು ಶ್ರೀಗುರುರಾಜರು ಈ ರಾಮಚಾರಿತ್ರ್ಯ-ಮಂಜರಿಯಲ್ಲಿ ಕೇವಲ ಹನ್ನೊಂದು ಸ್ರಗ್ಧರಾವೃತ್ತದ ಶ್ಲೋಕಗಳಿಂದ ಸಂಗ್ರಹಿಸಿದ್ದಾರೆ. ಇದರಿಂದ ಭಕ್ತರಿಗೆ ಪುನಃ ಪುನಃ ವಾಲ್ಮೀಕಿಗಳ ಸ್ಮರಣೆ ಬರುತ್ತದೆ ವಾಲ್ಮೀಕಿಗಳು ವಿಸ್ತಾರವಾಗಿ ಹೇಳಿದ ಕಥೆಯನ್ನೇ ಶ್ರೀಗುರುಗಳು ಸಂಕ್ಷೇಪವಾಗಿ ಹೇಳಿದ್ದಾರೆ ಎಂದು ಸ್ಮರಿಸಿಕೊಂಡೇ ಭಕ್ತರು ರಾಮಚಾರಿತ್ರ್ಯಮಂಜರಿಯನ್ನು ಪಠಿಸುತ್ತಾ ಅರ್ಥಾನುಸಂಧಾನ ಮಾಡಿಕೊಳ್ಳುತ್ತಾರೆ. ರಾಮಾಯಣವನ್ನು ಓದುವಾಗ ವಾಲ್ಮೀಕಿ ಸ್ಮರಣೆ ಬಂದಂತೆ ರಾಮಚಾರಿತ್ರ್ಯಮಂಜರಿಯನ್ನು ಓದುವಾಗಲೂ ವಾಲ್ಮೀಕಿ ಋಷಿಗಳ ಸ್ಮರಣೆ ಬರುತ್ತದೆ ಶ್ರೀಮನ್ಮಧ್ವಾಚಾರ್ಯರು ಮಹಾಭಾರತತಾತ್ಪರ್ಯ-ನಿರ್ಣಯದಲ್ಲಿ ಹೇಳಿದ ಶ್ರೀರಾಮಚಂದ್ರನ ಕಥೆಯನ್ನು ಶ್ರೀರಾಘವೇಂದ್ರಗುರುವರ್ಯರು ಸಂಗ್ರಹಿಸಿದ್ದಾರೆ. ಆದುದರಿಂದ ಆ ಶ್ರೀರಾಘವೇಂದ್ರಗುರುಸಾರ್ವಭೌಮರನ್ನು ಪುನಃ ಸ್ತುತಿಸುತ್ತೇವೆ.

(ಹಿಂದಿನ ಶ್ಲೋಕದಲ್ಲಿ ಗುರುಗಳಿಗೆ 'ನಮಾಮಿ' ಎಂದು ನಮಸ್ಕಾರ ಮಾಡಿದ್ದಾರೆ. ಇಲ್ಲಿ ನೌಮಿ ಎಂದು ಹೇಳಿ ಸ್ತುತಿಸುತ್ತೇವೆ ಎಂದು ಹೇಳಿದ್ದಾರೆ. 'ನು' ಧಾತುವಿಗೆ ಸ್ತುತಿ ಎಂದು ಅರ್ಥ. ಹಿಂದೆ ಸ್ತುತಿ ಮಾಡಿಲ್ಲವಾದ್ದರಿಂದ ಪುನಃ ಸ್ತುತಿಸುತ್ತೇನೆ ಎಂದು ಹೇಳಿದ್ದು ಅಸಂಗತವಲ್ಲವೇ ಎಂದು ಆಕ್ಷೇಪವು ಇಲ್ಲಿ ಹುಟ್ಟಿಕೊಳ್ಳಬಹುದು. ಆದರೆ ಹಿಂದಿನ ಶ್ಲೋಕದಲ್ಲಿ ನಮಸ್ಕಾರ ಮಾಡಿದಂತೆ ಸ್ತೋತ್ರವನ್ನು ಮಾಡಿದ್ದಾರೆ ಎಂದು ತಿಳಿದುಕೊಳ್ಳಬೇಕು. ಅಲ್ಲಿರುವ ಗುರುಗಳ ವಿಶೇಷಣಗಳು ಗುರುಸ್ತುತಿಗೋಸ್ಕರವೇ ಬಂದಿವೆ. ವಿಶೇಷಣಪದಗಳು ವಿಶೇಷ್ಯಪ್ರಶಂಸೆಗೋಸ್ಕರವೇ ಬಂದಿರುತ್ತವೆ ಎಂದು ಜ್ಞಾನಿಗಳು ಹೇಳಿದ್ದಾರೆ. 'ನಾರಾಯಣಂ ನಿಖಿಲಪೂರ್ಣಗುಣೈಕದೇಹಂ' ಎಂಬ ಅನುವ್ಯಾಖ್ಯಾನಪದ್ಯಕ್ಕೆ ವ್ಯಾಖ್ಯಾನ ಮಾಡುತ್ತಾ ಶ್ರೀಟೀಕಾಕೃತ್ಪಾದರು ಮಂಗಳ ಪದ್ಯದ ಏಳು ಯೋಜನೆಗಳಲ್ಲಿ ಮೊದಲನೆಯ ಪಕ್ಷದಲ್ಲಿ 'ಪ್ರಯೋಜನಂ ಚ ಸ್ತುತಿಪದಾನಾಂ ವಿಶೇಷ್ಯಪ್ರಶಂಸೈವ' ಎಂದು ಹೇಳಿದ್ದಾರೆ. ಆದ್ದರಿಂದ ಹಿಂದಿನ ಪದ್ಯದಲ್ಲಿಯೂ ಸ್ತುತಿಯು ಬಂದಿರುವುದರಿಂದ 'ಪುನಃ ನೌಮಿ' ಪುನಃ ಸ್ತುತಿಸುತ್ತೇನೆ ಎಂದು ಹೇಳಿರುವುದು ಸರಿಯಾಗಿದೆ).

**ವಿಗ್ರಹ —**

**ಸ್ಮಾರಿತವಾಲ್ಮೀಕಿಂ —** ವಲ್ಮೀಕಸ್ಯ ಅಪತ್ಯಂ ಪುಮಾನ್ ವಾಲ್ಮೀಕಿಃ । 'ಅತ ಇಞ್' ಎಂಬ ಸೂತ್ರದಿಂದ ಅಪತ್ಯಾರ್ಥದಲ್ಲಿ (ಮಗ ಎಂಬ ಅರ್ಥದಲ್ಲಿ ) ಇಞ್ ಪ್ರತ್ಯಯ (ವಲ್ಮೀಕಾತ್ ಭವತಿ ಇತಿ ವಾಲ್ಮೀಕಿಃ ಎಂಬ ಗುರುಪಾದಸೇವಾ ವ್ಯಾಖ್ಯಾನಕಾರರ ವಚನವು ಅರ್ಥನಿರ್ದೇಶ ಮಾತ್ರ) ಸ್ಮಾರಿತಃ ವಾಲ್ಮೀಕಿಃ ಯೇನ ಸಃ ಸ್ಮಾರಿತವಾಲ್ಮೀಕಿಃ, ತಂ ।

**ರಾಮಕಥಾಂ —** ರಾಮಸ್ಯ ಕಥಾ ರಾಮಕಥಾ, ತಾಮ್ ।

**ಕ್ರಿಯಾಪದ —**

'ಣು' ಸ್ತುತೌ, ಇತಿ (ಸ್ತುತ್ಯರ್ಥಕಾತ್ 'ನ್' ಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಕರ್ತರಿ ವರ್ತಮಾನೇ ಲಟ್ ಉತ್ತಮಪುರುಷೇ ಏಕವಚನೇ ನೌಮಿ ಇತಿ ರೂಪಮ್ ।

ನೌತಿ, ನುತಃ, ನುವಂತಿ । ನೌಷಿ , ನುಥಃ, ನುಥ । ನೌಮಿ, ನುವಃ, ನುಮಃ ।

ಸಮ್ ಉಪಸರ್ಗಪೂರ್ವಕಾತ್ 'ಗ್ರಹ ಉಪಾದಾನೇ' ಇತಿ ಉಪಾದಾನಾರ್ಥಕಾತ್ ಗ್ರಹಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ಕರ್ತರಿ ಭೂತೇ ಲುಙ್ ಪ್ರ.ಪು.ಏಕ. 'ಸಮಗ್ರಹೀತ್' ಇತಿ ರೂಪಮ್ ।

ಸಮ್ ಅಗ್ರಹೀತ್, ಅಗ್ರಹೀಷ್ಟಾಂ, ಅಗ್ರಹೀಷುಃ
ಅಗ್ರಹೀಃ, ಅಗ್ರಹೀಷ್ಟಂ, ಅಗ್ರಹೀಷ್ಟ
ಅಗ್ರಹೀಷಂ, ಅಗ್ರಹೀಷ್ವ , ಅಗ್ರಹೀಷ್ಮ.

**ಪ್ರಯೋಗ —** ಅಹಂ ತಂ ದೇಶಿಕಂ ನೌಮಿ (ಕರ್ತರಿ) ಮಯಾ ಸಃ ದೇಶಿಕಃ ನೂಯತೇ । (ಕರ್ಮಣಿ).

ಯಃ (ಶ್ರೀರಾಘವೇಂದ್ರಃ) ರಾಮಕಥಾಂ ಸಮಗ್ರಹೀತ್ । (ಕರ್ತರಿ).

ಯೇನ (ಶ್ರೀರಾಘವೇಂದ್ರೇಣ) ರಾಮಕಥಾ ಸಮಗ್ರಾಹಿ । (ಕರ್ಮಣಿ).

**ಅಲಂಕಾರ —** ಈ ಪದ್ಯದಲ್ಲಿ ಸ್ಮೃತ್ಯಲಂಕಾರವಿದೆ. ರಾಮಾಯಣದಲ್ಲಿ ವಿಸ್ತಾರವಾಗಿ ವರ್ಣಿತವಾದ ರಾಮಕಥೆಯನ್ನು ಸ್ರಗ್ಧರಾವೃತ್ತದಿಂದ ವರ್ಣಿಸಿ ವಾಲ್ಮೀಕಿಯನ್ನು ಸ್ಮರಣೆಗೆ ತಂದುಕೊಟ್ಟಿರುವವರು ಎಂದು ಹೇಳಿದ್ದರಿಂದ 'ಸ್ಮೃತಿ' ಅಲಂಕಾರ 'ಸ್ಮೃತಿಮತ್' ಅಲಂಕಾರ ಎಂದೂ ಇದನ್ನು ಹೇಳುತ್ತಾರೆ.

ಲಕ್ಷಣ ಮತ್ತು ಉದಾಹರಣೆಗಳು— ಅಲಂಕಾರ ಮಂಜರಿಯಲ್ಲಿ ಹೇಳಿದಂತೆ - 'ಸ್ಮೃತಿ ಸ್ಮೃತೌ ಸ್ಮರಾಮ್ಯದ್ರೇಃ ಧೈರ್ಯಂ ದೃಷ್ಟ್ವಾ ಜಯೀಂದ್ರ ತೇ' ಸ್ಮರಣೆಯನ್ನು ವರ್ಣಿಸಿದಾಗ ಸ್ಮೃತ್ಯಲಂಕಾರ. ''ಶ್ರೀವಿಜಯೀಂದ್ರರೇ, ನಿಮ್ಮ ಧೈರ್ಯವನ್ನು ನೋಡಿ ನಾನು ಪರ್ವತವನ್ನು ಸ್ಮರಿಸುತ್ತೇನೆ.'' ಶ್ರೀವಿಜಯೀಂದ್ರರ ಧೈರ್ಯವನ್ನು ನೋಡಿದಾಗ ಧೀರವಾದ, ಸ್ಥಿರವಾದ ಪರ್ವತದ ಸ್ಮರಣೆಯುಂಟು ಬರುತ್ತದೆ ಎಂಬುದಾಗಿ ಶ್ರೀಸುಧೀಂದ್ರತೀರ್ಥರು ರಚಿಸಿದ ಅಲಂಕಾರಮಂಜರಿಯಲ್ಲಿ ಲಕ್ಷಣ ಮತ್ತು ಉದಾಹರಣೆಗಳಿವೆ. ಅದರಂತೆ ಇಲ್ಲಿಯೂ ತಿಳಿದುಕೊಳ್ಳಬೇಕು.



**ಅವತಾರಿಕಾ** — ಪೂರ್ವಶ್ಲೋಕದಲ್ಲಿ ನಮಸ್ಕರಿಸಿದ ಶ್ರೀರಾಘವೇಂದ್ರಗುರುವರ್ಯರನ್ನೇ ಭಕ್ತ್ಯತಿಶಯ-ಪೂರ್ವಕವಾಗಿ ಪುನಃ ನಮಸ್ಕರಿಸುತ್ತಾರೆ.

**ಮೂಕೋಽಪಿ ಯತ್ಪ್ರಸಾದೇನ ಮುಕುಂದಶಯನಾಯತೇ ।**
**ರಾಜರಾಜಾಯತೇ ರಿಕ್ತೋ ರಾಘವೇಂದ್ರಂ ತಮಾಶ್ರಯೇ ॥ 13 ॥**

**ಪದಚ್ಛೇದ** — ಮೂಕಃ, ಅಪಿ, ಯತ್ಪ್ರಸಾದೇನ, ಮುಕುಂದಶಯನಾಯತೇ, ರಾಜರಾಜಾಯತೇ, ರಿಕ್ತಃ ರಾಘವೇಂದ್ರಂ, ತಂ, ಆಶ್ರಯೇ ।

**ಅನ್ವಯ** — ಯತ್ಪ್ರಸಾದೇನ ಮೂಕಃ ಅಪಿ ಮುಕುಂದಶಯನಾಯತೇ, ರಿಕ್ತಃ (ಅಪಿ)ರಾಜರಾಜಾಯತೇ, ತಂ ರಾಘವೇಂದ್ರಂ ಆಶ್ರಯೇ ।

**ಅನ್ವಯಾರ್ಥ** —

**ಯತ್ಪ್ರಸಾದೇನ** = ಯಾವ ಶ್ರೀರಾಘವೇಂದ್ರಗುರುರಾಜರ ಅನುಗ್ರಹದಿಂದ,
**ಮೂಕಃ ಅಪಿ** = ಮೂಕನೂ ಕೂಡ (ಹುಟ್ಟುಮೂಕ, ಹುಟ್ಟುಕಿವುಡನೂ ಕೂಡ)
**ಮುಕುಂದಶಯನಾಯತೇ** = ನಾರಾಯಣನ ಹಾಸಿಗೆಯಾಗಿರುವ ಶೇಷನಂತೆ ಆಗುತ್ತಾನೋ,
**ರಿಕ್ತಃ (ಅಪಿ)** = ಕಡು ಬಡವನೂ ಕೂಡ,
**ರಾಜರಾಜಾಯತೇ** = ಕುಬೇರನಂತಾಗುತ್ತಾನೋ,
**ತಂ** = ಅಂತಹ
**ರಾಘವೇಂದ್ರಂ** = ಶ್ರೀರಾಘವೇಂದ್ರಗುರುಸಾರ್ವಭೌಮರನ್ನು
**ಆಶ್ರಯೇ** = ಆಶ್ರಯಿಸುತ್ತೇನೆ. (ನಮಿಸುತ್ತೇನೆ).

**ತಾತ್ಪರ್ಯ** — ಶ್ರೀರಾಘವೇಂದ್ರಗುರುರಾಜರ ಅನುಗ್ರಹವಾದರೆ ಹುಟ್ಟುಮೂಕ ಹುಟ್ಟುಕಿವುಡನಾದವನೂ ಕೂಡ (ಏಡ ಮೂಕನೂ ಕೂಡ)ಸಹಸ್ರವದನನಾದ ಶ್ರೀಹರಿಯ ಶಯನನಾದ ಶೇಷದೇವನಂತೆ ಪಾಠ ಪ್ರವಚನ ಮಾಡುವ ಸಾಮರ್ಥ್ಯವುಳ್ಳವನಾಗುತ್ತಾನೆ ಒಳ್ಳೆಯ ಮಾತುಗಾರನಾಗುತ್ತಾನೆ . ಹುಟ್ಟುದರಿದ್ರನೂ ಕೂಡ ನವನಿಧಿ-ಸಂಪನ್ನನಾದ ಕುಬೇರನಂತೆ ಐಶ್ವರ್ಯಸಂಪನ್ನನಾಗುತ್ತಾನೆ. ಇಂತಹ ಅನುಗ್ರಹ ಮಾಡುವ ಸಾಮರ್ಥ್ಯವುಳ್ಳ, ಶ್ರೀರಾಘವೇಂದ್ರಗುರುವರ್ಯರನ್ನು, ನಾನು ಆಶ್ರಯಿಸುತ್ತೇನೆ, (ನಮಸ್ಕರಿಸುತ್ತೇನೆ.) ಎಂತಹವನೂ ಶ್ರೀರಾಯರ ಆಶ್ರಯದಿಂದ ಚತುರ್ವಿಧ ಪುರುಷಾರ್ಥಸಂಪನ್ನನಾಗುತ್ತಾನೆ. ನಾನೂ ಅವರ ಅನುಗ್ರಹದಿಂದಲೇ ಈ ಕಾವ್ಯವನ್ನು ರಚಿಸುತ್ತೇನೆ ಎಂದು ಭಾವ.

**ವಿಗ್ರಹ** —

**ಯತ್ಪ್ರಸಾದೇನ** — ಯಸ್ಯ ಪ್ರಸಾದಃ ಯತ್ಪ್ರಸಾದಃ, ತೇನ।

**ಮುಕುಂದಶಯನಾಯತೇ** — ಮುಕುಂದಸ್ಯ ಶಯನಂ ಮುಕುಂದಶಯನಂ, ಮುಕುಂದಶಯನಂ ಇವ ಆಚರತಿ ಇತಿ ಮುಕುಂದಶಯನಾಯತೇ, ಇದು ನಾಮಧಾತು. ಇಲ್ಲಿ ''ಕರ್ತುಃ ಕ್ಯಙ್ ಸಲೋಪಶ್ಚ'' 3-1-11, ಎಂಬ ಸೂತ್ರದಿಂದ ಅದರಂತೆ ಆಚರಿಸುತ್ತಾನೆ, ನಡೆದುಕೊಳ್ಳುತ್ತಾನೆ ಎಂಬ ಅರ್ಥದಲ್ಲಿ ಕ್ಯಙ್ ಪ್ರತ್ಯಯ ಬಂದಿದೆ.

**ಕ್ರಿಯಾಪದ** —

ಇತ್ಯಾದಿ ರೂಪಗಳನ್ನು ಹೇಳಬೇಕು. 'ಮುಕುಂದಶಯನಾಯತೇ' ಇದು ವರ್ತಮಾನಕಾಲ ಲಟ್ ಆತ್ಮನೇಪದಿ, ಪ್ರ.ಪು.ಏ. ।

ಮುಕುಂದಶಯನಾಯತೇ, ಮುಕುಂದಶಯನಾಯೇತೇ, ಮುಕುಂದಶಯನಾಯಂತೇ ।

ರಾಜರಾಜಿವ ಆಚರತಿ = ರಾಜರಾಜಾಯತೇ, ಇದರ ರೂಪವನ್ನು ಹಿಂದಿನಂತೆಯೇ ಹೇಳಬೇಕು. ಇದು ವರ್ತಮಾನಕಾಲ.

ಆಙ್ ಉಪಸರ್ಗಪೂರ್ವಕಾತ್ (ಶ್ರಯಣಾರ್ಥಕಾತ್) 'ಶ್ರಿಞ್ ಶ್ರಯಣೇ' ಇತ್ಯುಕ್ತಾತ್ ಶ್ರಿಧಾತೋಃ ಆತ್ಮನೇಪದಿನಃ ಸಕರ್ಮಕಾತ್ ಕರ್ತರಿ ವರ್ತಮಾನೇ ಲಟ್ ಉತ್ತಮಪುರುಷೇ ಏಕವಚನೇ 'ಆಶ್ರಯೇ' ಇತಿ ರೂಪಮ್

| | | |
|---|---|---|
| ಶ್ರಯತೇ, | ಶ್ರಯೇತೇ, | ಶ್ರಯಂತೇ । |
| ಶ್ರಯಸೇ, | ಶ್ರಯೇಥೇ, | ಶ್ರಯಧ್ವೇ। |
| ಶ್ರಯೇ, | ಶ್ರಯಾವಹೇ, | ಶ್ರಯಾಮಹೇ । |

**ಪ್ರಯೋಗ** — ಮೂಕಃ ಮುಕುಂದಶಯನಾಯತೇ । (ಅಕರ್ಮಕ ಕರ್ತರಿ).

ಮೂಕೇನ ಮುಕುಂದಶಯನಾಯ್ಯತೇ । (ಭಾವೇ).

ರಿಕ್ತಃ ರಾಜರಾಜಾಯತೇ । (ಕರ್ತರಿ ಅಕರ್ಮಕ).

ರಿಕ್ತೇನ ರಾಜರಾಜಾಯ್ಯತೇ । (ಭಾವೇ).

ಅಹಂ ತಂ ರಾಘವೇಂದ್ರಂ ಆಶ್ರಯೇ । (ಕರ್ತರಿ).

ಮಯಾ ಸಃ ರಾಘವೇಂದ್ರಃ ಆಶ್ರೀಯತೇ । (ಕರ್ಮಣಿ).

**ಅಲಂಕಾರ** — ಇಲ್ಲಿ ಎರಡು ಧರ್ಮವಾಚಕಲುಪ್ತೋಪಮಾಲಂಕಾರಗಳಿವೆ. ಮೂಕ ಉಪಮೇಯ, ಮುಕುಂದಶಯನ, ಶೇಷನು ಉಪಮಾನ, ಎರಡನೆಯದರಲ್ಲಿ ರಿಕ್ತನು ಉಪಮೇಯ, ರಾಜರಾಜನು ಉಪಮಾನ. ಎರಡು ಕಡೆಯೂ ಕೂಡ ಕ್ರಮವಾಗಿ ಸಕಲ ಶಾಸ್ತ್ರಪ್ರವಚನಸಾಮರ್ಥ್ಯ ಮತ್ತು ಸಮಗ್ರೈಶ್ವರ್ಯಸಂಪನ್ನತೆ ಎಂಬ ಸಾಧಾರಣಧರ್ಮವನ್ನು ಇವಾದಿವಾಚಕಶಬ್ದವನ್ನು ಹೇಳಿಲ್ಲವಾದುದರಿಂದ ಇಲ್ಲಿ ಧರ್ಮವಾಚಕಲುಪ್ತೋಪಮಾ-ಲಂಕಾರವಾಗುತ್ತದೆ. ಲಕ್ಷಣೋದಾಹರಣೆಗಳು ಹಿಂದೆಯೇ ಹೇಳಲ್ಪಟ್ಟಿವೆ. ಇಲ್ಲಿ ಮುಕುಂದಶಯನಾಯತೇ ಎಂಬ ಪದದಿಂದ ಸೂಚಿತವಾಗುವ ಸಕಲ ಶಾಸ್ತ್ರ ಪ್ರವಚನಧುರೀಣತೆಯನ್ನೂ, ರಾಜರಾಜಾಯತೇ ಎಂಬ ಪದದಿಂದ

ಸೂಚಿತವಾಗುವ ಸಕಲೈಶ್ವರ್ಯಸಂಪನ್ನತೆಯನ್ನು ಸಾಧಾರಣಧರ್ಮವೆಂದು ಇಟ್ಟುಕೊಳ್ಳಲಾಗುವುದಿಲ್ಲ. ಹಾಗಿದ್ದರೆ ಇಲ್ಲಿ ಕ್ಯಜ್ ಪ್ರತ್ಯಯವಿರುವುದಿರಂದ ಉಪಮಾವಾಚಕಶಬ್ದವೂ ಇದೆ ಎಂದು ಹೇಳಬಹುದಾಗಿತ್ತು ಏಕೆಂದರೆ ಅದು ಉಪಮಾವಾಚಕವಾದ ಇವಾದಿಗಳಿಗೆ ಸೂಚಕ ಶಬ್ದವಲ್ಲವೇ ? ಆದುದರಿಂದ ಇಲ್ಲಿ 'ಧರ್ಮವಾಚಕಲುಪ್ತಾ' ಉಪಮಾಲಂಕಾರವನ್ನೇ ಹೇಳಬೇಕು.



**ಅವತಾರಿಕಾ** — ಹೀಗೆ ಕವಿಗಳು ಕಾವ್ಯಾದಿಯಲ್ಲಿ ಸ್ವೋತ್ತಮರ ನಮನ ಸ್ತುತಿ ಪ್ರಾರ್ಥನೆಗಳನ್ನು ಮಾಡಿ ಈಗ ತಂದೆಯವರನ್ನು ಪ್ರಾರ್ಥಿಸುತ್ತಾರೆ—

**ಪ್ರಸಾದ್ಯ ನರಪಂಚಾಸ್ಯಂ ಪ್ರಾಪ್ತಂ ವೈದುಷ್ಯಮದ್ಭುತಮ್ ।**
**ಯೇನ ಲಕ್ಷ್ಮೀನೃಸಿಂಹೇನ ತಾತಪಾದಂ ತಮಾಶ್ರಯೇ ॥ 14 ॥**

**ಪದಚ್ಛೇದ** — ಪ್ರಸಾದ್ಯ, ನರಪಂಚಾಸ್ಯಂ, ಪ್ರಾಪ್ತಂ, ವೈದುಷ್ಯಂ, ಅದ್ಭುತಂ, ಯೇನ, ಲಕ್ಷ್ಮೀನೃಸಿಂಹೇನ, ತಾತಪಾದಂ, ತಂ, ಆಶ್ರಯೇ ।

**ಅನ್ವಯ** — ಯೇನ ಲಕ್ಷ್ಮೀನೃಸಿಂಹೇನ ನರಪಂಚಾಸ್ಯಂ ಪ್ರಸಾದ್ಯ ಅದ್ಭುತಂ ವೈದುಷ್ಯಂ ಪ್ರಾಪ್ತಂ ತಂ ತಾತಪಾದಂ ಆಶ್ರಯೇ ।

**ಅನ್ವಯಾರ್ಥ** —

**ಯೇ** = ಯಾವ
**ಲಕ್ಷ್ಮೀನೃಸಿಂಹೇನ** = ಲಕ್ಷ್ಮೀನರಸಿಂಹಾಚಾರ್ಯರಿಂದ
**ನರಪಂಚಾಸ್ಯಂ** = ಲಕ್ಷ್ಮೀನರಸಿಂಹದೇವರನ್ನು
**ಪ್ರಸಾದ್ಯ** = (ತಪಸ್ಸು ಮೊದಲಾದ ಉಪಾಸನೆಯಿಂದ) ಪ್ರಸನ್ನೀಕರಿಸಿಕೊಂಡು
**ಅದ್ಭುತಂ** = (ಭಗವಂತನ ಪ್ರಸಾದದಿಂದಲೇ ಪ್ರಾಪ್ತವಾದುದರಿಂದ) ಆಶ್ಚರ್ಯಕರವಾದ, (ಎಣೆ-ಯಿಲ್ಲದ)
**ವೈದುಷ್ಯಂ** = ಪಾಂಡಿತ್ಯವು
**ಪ್ರಾಪ್ತಂ** = ಹೊಂದಲ್ಪಟ್ಟಿತೋ
**ತಂ** = ಅಂತಹ ಮಹಿಮೆಯಿಂದ ಕೂಡಿದ
**ತಾತಪಾದಂ** = ಪೂಜ್ಯಸ್ವರೂಪರಾದ ತಂದೆಯವರನ್ನು
**ಆಶ್ರಯೇ** = (ನನ್ನ ಅಭೀಷ್ಟಪ್ರಾಪ್ತಿಗಾಗಿ) ಆಶ್ರಯಿಸುತ್ತೇನೆ. (ಸೇವಿಸುತ್ತೇನೆ, ವಂದಿಸುತ್ತೇನೆ).

**ತಾತ್ಪರ್ಯ** — ಶ್ರೀರಾಘವೇಂದ್ರವಿಜಯಮಹಾಕಾವ್ಯದ ಕರ್ತೃಗಳಾದ ನಾರಾಯಣಾಚಾರ್ಯರ ತಂದೆಯವರು ಶ್ರೀಲಕ್ಷ್ಮೀನರಸಿಂಹಾಚಾರ್ಯರು. ಅವರು ಲಕ್ಷ್ಮೀನರಸಿಂಹದೇವರನ್ನು ತಪಸ್ಸು, ವ್ರತ ಮುಂತಾದ ಮಹೋಪಾಸನೆಗಳಿಂದ ಒಲಿಸಿಕೊಂಡು ಆಶ್ಚರ್ಯಕರವಾದ ಅಸಾಧಾರಣ ಪಾಂಡಿತ್ಯವನ್ನು ಗಳಿಸಿದ್ದರು. ಇಂತಹ ಪೂಜ್ಯಸ್ವರೂಪರಾದ ನನ್ನ ತಂದೆಗಳನ್ನು ನಾನು ಆಶ್ರಯಿಸುತ್ತೇನೆ.

**ವಿಶೇಷವಿಚಾರ** — ಶ್ರೀಲಕ್ಷ್ಮೀನರಸಿಂಹಾಚಾರ್ಯರು ಶ್ರೀಗುರುರಾಜರ ಪೂರ್ವಾಶ್ರಮದ ಅಕ್ಕಂದಿರಾದ ಶ್ರೀವೇಂಕಟಾಂಬಾದೇವಿಯವರ ಪತಿಗಳು. ಅವರು ಶ್ರೀರಾಯರಿಗೆ ಪೂರ್ವಾಶ್ರಮದಲ್ಲಿ ಕಾವ್ಯ ವ್ಯಾಕರಣಾದಿ ಪಾಠವನ್ನು ಹೇಳಿದ್ದಾರೆ. ಅವರು ಮಹಾಮಹಿಮೋಪೇತರಾದ ಉತ್ತಮ ಪಂಡಿತರು. ಅವರ ಮಕ್ಕಳು ಈ ಗ್ರಂಥಕರ್ತೃಗಳು. 'ಮಾತೃದೇವೋ ಭವ ಪಿತೃದೇವೋ ಭವ' ಎಂಬ ಶ್ರುತಿಯಂತೆ ತಮ್ಮ ಪೂಜ್ಯ ಪಿತೃಗಳಿಗೆ ಇಲ್ಲಿ ನಾರಾಯಣಾಚಾರ್ಯರು ಸ್ತುತಿ ನಮಸ್ಕಾರಗಳನ್ನು ಮಾಡಿದ್ದಾರೆ. ಇಲ್ಲಿ ಪಿತೃನಮಸ್ಕಾರವು ಉಪಲಕ್ಷಣ (ಸೂಚನಾ) ಮಾತ್ರವಾದುದರಿಂದ ತಾಯಿಗೂ ನಮಸ್ಕಾರ ಮಾಡಿದ್ದಾರೆಂದು ತಿಳಿಯಬೇಕು. 'ಉತ್ತಮಾನಾಂ ಸ್ವರೂಪಂ ತು ಪಾದಶಬ್ದೇನ ಭಣ್ಯತೇ' ಎಂಬ ವಚನದಂತೆ ಇಲ್ಲಿ ತಮ್ಮ ತಂದೆಯವರನ್ನು 'ತಾತಪಾದ' ಪೂಜ್ಯ- ಸ್ವರೂಪರಾದ ತಂದೆಯವರು ಎಂದು ಹೇಳಿದ್ದಾರೆ.

**ವಿಗ್ರಹ** —

**ನರಪಂಚಾಸ್ಯಂ** — ಪಂಚಂ (ವಿಸ್ತೃತಂ) ಆಸ್ಯಂ ಯಸ್ಯ ಸಃ ಪಂಚಾಸ್ಯಃ (ಸಿಂಹಃ), ನರಃ ಪಂಚಾಸ್ಯ ಇವ ನರಪಂಚಾಸ್ಯಃ, ತಂ ।

**ವೈದುಷ್ಯಂ** — ವಿದುಷಃ ಭಾವಃ ವೈದುಷ್ಯಂ ।

**ತಾತಪಾದಃ** — ತಾತ ಇತಿ ಪಾದಃ ತಾತಪಾದಃ, ತಂ ।

**ಕ್ರಿಯಾಪದ** — ಇಲ್ಲಿರುವ ಆಶ್ರಯೇ ಎಂಬ ಕ್ರಿಯಾಪದದ ರೂಪ, ಪ್ರಯೋಗಪರಿರ್ತನೆ ಎಲ್ಲವೂ 13ನೆಯ 'ಮೂಕೋಽಪಿ' ಎಂಬ ಪದ್ಯವ್ಯಾಖ್ಯಾನದಲ್ಲಿ ಬಂದಿದೆ.

**ಅಲಂಕಾರ** — 'ನರಪಂಚಾಸ್ಯಂ' ಎಂಬಲ್ಲಿ ನರ ಉಪಮೇಯ, ಪಂಚಾಸ್ಯ ಉಪಮಾನ, ಉಪಮಾ- ವಾಚಕ ಮತ್ತು ಸಾಧಾರಣ ಧರ್ಮಗಳನ್ನು ಹೇಳಿಲ್ಲ . ಆದುದರಿಂದ ಇಲ್ಲಿ ಧರ್ಮವಾಚಕಲುಪ್ತಾ ಉಪಮಾ- ಲಂಕಾರ.



**ಅವತಾರಿಕಾ** — ಮಂಗಳಾಚರಣೆಯನ್ನು ಮಾಡಿದ್ದಾಯಿತು. ಮುಂದೆ ಏನು ಮಾಡಲಿದ್ದಾರೆ ಎಂಬ ವಿಷಯವನ್ನು ಪ್ರತಿಜ್ಞಾ ಪುರಸ್ಸರವಾಗಿ ಹೇಳಬೇಕಾಗಿದೆ. ಅದನ್ನು ಹದಿನಾರನೆಯ (16) ಕಲಯೇ ಕವನಂ ಕಿಂಚಿತ್ (ಸ್ವಲ್ಪವಾದ ಕಾವ್ಯವನ್ನು ಮಾಡುತ್ತೇನೆ) ಎಂಬ ಮುಂದಿನ ಪದ್ಯದಲ್ಲಿ ಹೇಳುತ್ತಾರೆ. ಅದಕ್ಕೂ ಮೊದಲು 'ಈ ರಾಘವೇಂದ್ರವಿಜಯವೆಂಬ ಮಹಾಕಾವ್ಯವನ್ನು ಏತಕ್ಕಾಗಿ ಮಾಡಬೇಕು ? ಈ ಕಾವ್ಯನಿರ್ಮಾಣಕ್ಕೆ ಪ್ರಯೋಜನ- ವಿಲ್ಲವಲ್ಲ' ಎಂಬ ಆಶಂಕೆಗೆ ಉತ್ತರರೂಪವಾಗಿ ಈ ಪದ್ಯವನ್ನು ಕವಿಗಳು ರಚಿಸಿದ್ದಾರೆ.

**ಪ್ರಾಪ್ತಾನ್ಯನುತಿಪಾಪೌಘರಸನಾಂ ಪಾವಯಾಮ್ಯಹಮ್ ।**
**ಗುರ್ವಂತರ್ಯಾಮಿಭಗವತ್‌ಸ್ತುತಿಗಂಗಾಂಬುಮಜ್ಜನಾತ್ ॥ 15 ॥**

**ಪದಚ್ಛೇದ** — ಪ್ರಾಪ್ತಾನ್ಯನುತಿಪಾಪೌಘರಸನಾಂ, ಪಾವಯಾಮಿ, ಅಹಂ, ಗುರ್ವಂತರ್ಯಾಮಿ- ಭಗವತ್‌ಸ್ತುತಿಗಂಗಾಂಬುಮಜ್ಜನಾತ್ ।

**ಅನ್ವಯ** — ಅಹಂ ಪ್ರಾಪ್ತಾನ್ಯನುತಿಪಾಪೌಘರಸನಾಂ ಗುರ್ವಂತರ್ಯಾಮಿಭಗವತ್‌ಸ್ತುತಿಗಂಗಾಂಬು- ಮಜ್ಜನಾತ್ ಪಾವಯಾಮಿ ।

**ಅನ್ವಯಾರ್ಥ —**

**ಅಹಂ** = ನಾನು,

**ಪ್ರಾಪ್ತಾನ್ಯನುತಿಪಾಪೌಘರಸನಾಂ — ಪ್ರಾಪ್ತ** = ಲಭಿಸಿದ, **ಅನ್ಯ** = ಇತರ ಸಾಧಾರಣ ಮಾನವರ, **ನುತಿ** = ಸ್ತೋತ್ರದಿಂದ ಉಂಟಾದ, **ಪಾಪೌಘ** = ಪಾಪರಾಶಿಯುಳ್ಳ, **ರಸನಾಂ** = ನಾಲಿಗೆ-ಯನ್ನು

**ಗುರ್ವಂತರ್ಯಾಮಿಭಗವತ್‌ಸ್ತುತಿಗಂಗಾಂಬುಮಜ್ಜನಾತ್ — ಗುರು** = ಶ್ರೀರಾಘವೇಂದ್ರ-ಗುರುರಾಜರ, **ಅಂತರ್ಯಾಮಿ** = ಹೃದಯಕಮಲ ಮಧ್ಯನಿವಾಸಿಯಾದ, **ಭಗವತ್** = ಶ್ರೀಮೂಲರಾಮಚಂದ್ರಭಗವಂತನ, **ಸ್ತುತಿ** = ಸ್ತೋತ್ರವೆಂಬ, **ಗಂಗಾಂಬು** = ಗಂಗಾಜಲದಲ್ಲಿ, **ಮಜ್ಜನಾತ್** = ಮುಳುಗಿ ಸ್ನಾನ ಮಾಡುವುದರಿಂದ

**ಪಾವಯಾಮಿ** = ಪವಿತ್ರಗೊಳಿಸುತ್ತೇನೆ.

**ತಾತ್ಪರ್ಯ —** ನಾನು ಲೋಭಾದಿವಶನಾಗಿ ಇತರ ಸಾಮಾನ್ಯ ಮಾನವರ ಸ್ತುತಿಯನ್ನು ಮಾಡಿರಬಹುದು. ನರಸ್ತುತಿಯು ಬಹು ಪಾಪಕರವಾದುದು. ಆದ್ದರಿಂದ ನನಗೆ ಬಂದಿರುವ ಪಾಪಸಮೂಹವನ್ನು ಹೊತ್ತಿರುವ ನಾಲಿಗೆಯಿಂದ ಪ್ರಕೃತದಲ್ಲಿ ದೇವಸ್ವಭಾವರಾದ ಗುರುರಾಜರನ್ನೂ ಅವರ ಅಂತರ್ಯಾಮಿಯಾದ ಶ್ರೀರಾಮ-ಚಂದ್ರದೇವರನ್ನು ಸ್ತೋತ್ರ ಮಾಡಿ, ಆ ಪವಿತ್ರ ಸ್ತೋತ್ರವೆಂಬ ಪಾವನ ಗಂಗಾಜಲದಲ್ಲಿ ನನ್ನ ನಾಲಿಗೆಗೆ ಸ್ನಾನ ಮಾಡಿಸಿ, ನಾನು ನನ್ನ ನಾಲಿಗೆಯನ್ನು ಪವಿತ್ರಗೊಳಿಸುತ್ತೇನೆ, ನಾನೂ ಪವಿತ್ರನಾಗುತ್ತೇನೆ. ಗಂಗಾಜಲ ಸ್ನಾನದಿಂದ ಪಾಪವು ನಾಶವಾಗುವಂತೆ ಗುರ್ವಂತರ್ಯಾಮಿ ಭಗವಂತನ ಸ್ತೋತ್ರದಿಂದ ಪಾಪನಾಶವಾಗುತ್ತದೆ ಎಂದು ಭಾವ.

**ವಿಶೇಷವಿಚಾರ —** ಈ ಮಹಾಕಾವ್ಯವು ಶ್ರೀಗುರುಗಳ ಹೃದಯಕಮಲಮಧ್ಯನಿವಾಸಿಯಾದ ಭಗವಂತನ ಮಹಿಮಾವರ್ಣನರೂಪವೆಂದು ಹೇಳಿದ್ದರಿಂದ ಎಲ್ಲಾ ಮುಮುಕ್ಷುಗಳಿಗೂ ಜಿಜ್ಞಾಸುಗಳಿಗೂ ಅತ್ಯಂತ ಸ್ವೀಕಾರಾರ್ಹ ಎಂದು ಹೇಳಿದಂತಾಯಿತು. 'ಅಪ್ಯಚ್ಯುತೋ ಗುರುದ್ವಾರಾ ಪ್ರಸಾದಕೃದಹಂ ತ್ವಿತಿ' ಎಂಬಂತೆ ಪರಮಾತ್ಮನ ಅನು-ಗ್ರಹಕ್ಕಾಗಿ ನಾವು ಮುಖ್ಯಪ್ರಾಣ ಮತ್ತು ಅವನಿಗಿಂತಲೂ ಅವರರಾದ ಸ್ವೋತ್ತಮ ಗುರುಗಳನ್ನು ಆಶ್ರಯಿಸಬೇಕು ಎಂದು ಹೇಳಿದಂತೆಯೂ ಆಯಿತು.

**ವಿಗ್ರಹ —**

**ಪ್ರಾಪ್ತಾನ್ಯನುತಿಪಾಪೌಘರಸನಾಂ** – ಅನ್ಯೇಷಾಂ ನುತಯಃ ಅನ್ಯನುತಯಃ, ಅನ್ಯನುತಿಭಿಃ ಜನಿತಾನಿ ಪಾಪಾನಿ ಅನ್ಯನುತಿಪಾಪಾನಿ, (ಮಧ್ಯಮಪದಲೋಪಿ ಕರ್ಮಧಾರಯ ಸಮಾಸ) ಅಥವಾ ಅನ್ಯನುತಾ ಪಾಪಾನಿ ಅನ್ಯನುತಿಪಾಪಾನಿ, ಅನ್ಯನುತಿಪಾಪಾನಾಂ ಓಘಃ ಅನ್ಯನುತಿಪಾಪೌಘಃ, ಪ್ರಾಪ್ತಃ ಅನ್ಯನುತಿಪಾಪೌಘಃ, ಯಾಂ ಸಾ ಪ್ರಾಪ್ತಾನ್ಯನುತಿಪಾಪೌಘಾ, (ದ್ವಿತೀಯಾ ಬಹು-ವ್ರೀಹಿ) ಪ್ರಾಪ್ತಾನ್ಯನುತಿಪಾಪೌಘಾ ಚ ಸಾ, ರಸನಾ ಚ ಪ್ರಾಪ್ತಾನ್ಯನುತಿಪಾಪೌಘರಸನಾ, ತಾಂ ಪ್ರಾಪ್ತಾನ್ಯನುತಿಪಾಪೌಘರಸನಾಂ।

**ಗುರ್ವಂತರ್ಯಾಮಿಭಗವತ್‌ಸ್ತುತಿಗಂಗಾಂಬುಮಜ್ಜನಾತ್ —** ಅಂತಃ ಯಚ್ಛತಿ ನಿಯಚ್ಛತೀತಿ ಅಂತರ್ಯಾಮೀ, ಗುರೋಃ ಅಂತರ್ಯಾಮೀ ಗುರ್ವಂತರ್ಯಾಮೀ, ಗುರ್ವಂತ-ರ್ಯಾಮೀ ಚಾಸೌ ಭಗವಾಂಶ್ಚ ಗುರ್ವಂತರ್ಯಾಮಿಭಗವಾನ್, ಗುವಂತರ್ಯಾಮಿ-ಭಗವತಃ ಸ್ತುತಿಃ ಗುರ್ವಂತರ್ಯಾಮಿಭಗವತ್‌ಸ್ತುತಿಃ, ಗುರ್ವಂತರ್ಯಾಮಿಭಗವತ್-

ಸ್ತುತಿರೇವ ಗಂಗಾ ಗುರ್ವಂತರ್ಯಾಮಿಭಗವತ್‌ಸ್ತುತಿಗಂಗಾ, ಗಂಗಾಯಾಃ ಅಂಬು, ಗಂಗಾಂಬು, ಗುರ್ವಂತರ್ಯಾಮಿಭಗವತ್‌ಸ್ತುತಿಗಂಗಾಂಬುನಿ ಮಜ್ಜನಂ, ಗುರ್ವಂತ-ರ್ಯಾಮಿಭಗವತ್‌ಸ್ತುತಿಗಂಗಾಂಬುಮಜ್ಜನಂ, ತಸ್ಮಾತ್ ।

**ಕ್ರಿಯಾಪದ—**

'ಪೂಞ್' ಪವನೇ ಇತಿ (ಪವಿತ್ರೀಕರಣಾರ್ಥಕಾತ್ 'ಪೂ' (ಅಥವಾ ಪೂಜ್ ಪವನೇ) ಧಾತೋಃ (ಸ್ವಾರ್ಥಿಕಣಿಜಂತಾತ್) ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವರ್ತಮಾನೇ ಲಟ್ ಉತ್ತಮಪುರುಷೇ ಏಕವಚನೇ ಪಾವಯಾಮಿ ಇತಿ ರೂಪಮ್ ।

ಪಾವಯತಿ, ಪಾವಯತಃ, ಪಾವಯಂತಿ । ಇತ್ಯಾದಿ ರೂಪಗಳು.

**ಪ್ರಯೋಗ—** ಅಹಂ ರಸನಾಂ ಪಾವಯಾಮಿ । (ಕರ್ತರಿ).

ಮಯಾ ರಸನಾ ಪಾವ್ಯತೇ । (ಕರ್ಮಣಿ).

**ಅಲಂಕಾರ —** ಈ ಪದ್ಯದ ಉತ್ತರಾರ್ಧದಲ್ಲಿ ರೂಪಕಾಲಂಕಾರವಿದೆ. ಸ್ತುತಿಯು ವಿಷಯ, ಗಂಗೆಯು ವಿಷಯ. ಇವೆರಡಕ್ಕೆ ಪವಿತ್ರೀಕರಣಸಾಮರ್ಥ್ಯವೆಂಬ ಸಾಧಾರಣಧರ್ಮವಿರುವುದರಿಂದ ಅಭೇದವನ್ನು ವರ್ಣಿಸಿದ್ದಾರೆ.



**ಅವತಾರಿಕಾ —** ಈಗ ಕವಿಗಳು, ಸ್ವಾಹಂಕಾರ ಖಂಡನ ಮಾಡಿಕೊಳ್ಳುತ್ತಾ ವಿನಯಪೂರ್ವಕವಾಗಿ ನಾನು ಕಾವ್ಯವನ್ನು ರಚಿಸುತ್ತೇನೆ ಎಂಬ ಪ್ರತಿಜ್ಞೆಯನ್ನು ಮಾಡುತ್ತಾರೆ—

**ಕಲಯೇ ಕವನಂ ಕಿಂಚಿತ್ ಕವೀನಾಂ ಸಹವಾಸತಃ ।**

**ಸಹಕಾರದ್ರು(ಪಾಟೀರಗಿರಿ)ಸಾನ್ನಿಧ್ಯಾನ್ನಿಂಬದ್ರುರಿವ ಸೌರಭಮ್ ॥ 16 ॥**

**ಪದಚ್ಛೇದ —** ಕಲಯೇ, ಕವನಂ, ಕಿಂಚಿತ್, ಕವೀನಾಂ, ಸಹವಾಸತಃ, ಸಹಕಾರದ್ರುಸಾನ್ನಿಧ್ಯಾತ್ (ಪಾಟೀರಗಿರಿಸಾನ್ನಿಧ್ಯಾತ್) ನಿಬಂದ್ರುಃ, ಇವ, ಸೌರಭಮ್ ।

**ಅನ್ವಯ —** ಸಹಕಾರದ್ರುಸಾನ್ನಿಧ್ಯಾತ್ (ಪಾಟೀರಗಿರಿಸಾನ್ನಿಧ್ಯಾತ್) ನಿಂಬದ್ರುಃ ಸೌರಭಮಿವ ಅಹಂ ಕವೀನಾಂ ಸಹವಾಸತಃ ಕಿಂಚಿತ್ ಕವನಂ ಕಲಯೇ ।

**ಅನ್ವಯಾರ್ಥ—**

**ಸಹಕಾರದ್ರುಸಾನ್ನಿಧ್ಯಾತ್ — ಸಹಕಾರದ್ರು** = ಅತ್ಯಂತ ಮಧುರರಸ ಮತ್ತು ಸುವಾಸನೆಯಿಂದ ಕೂಡಿರುವ ಹಣ್ಣು ಬಿಡುವ ಮಾವಿನ ಮರದ, **ಸಾನ್ನಿಧ್ಯಾತ್** = ಸಾಮೀಪ್ಯದಿಂದ

**(ಪಾಟೀರಗಿರಿಸಾನ್ನಿಧ್ಯಾತ್ — ಪಾಟೀರಗಿರಿ** = ಚಂದನ ವೃಕ್ಷಗಳಿಗೆ ಆಶ್ರಯವಾದ ಮಲಯ-ಪರ್ವತದ, ಆಶ್ರಯವಾದ ಮಲಯಪರ್ವತದ, **ಸಾನ್ನಿಧ್ಯಾತ್** = ಸಮೀಪದಲ್ಲಿರುವುದರಿಂದ)

**ನಿಬಂದ್ರುಃ** = ಬೇವಿನ ಮರವು

**ಸೌರಭಂ ಇವ** = ಸುವಾಸನೆಯನ್ನು ಎಂಬಂತೆ

**ಅಹಂ** = ನಾನು

**ಕವೀನಾಂ** = ಕವಿತಾಸಾಮರ್ಥ್ಯವುಳ್ಳ ವಿದ್ವಾಂಸರ

**ಸಹವಾಸತಃ** = ಒಡನಾಟದಿಂದ

**ಕಿಂಚಿತ್** = (ಏನೋ ಒಂದು ರೀತಿಯ) (ಸಾಧಾರಣವಾದ)

**ಕವನಂ** = (ಕವಿತೆಯನ್ನು) (ಕಾವ್ಯವನ್ನು)

**ಕಲಯೇ** = ರಚಿಸುತ್ತೇನೆ.

**ತಾತ್ಪರ್ಯ** — ಒಂದು ಜಾತಿಯ ಮಾವಿನ ಮರವು ಅತ್ಯಂತ ಮಧುರವಾದ ಮತ್ತು ಸುವಾಸನೆಯಿಂದ ಕೂಡಿರುವ ಹಣ್ಣುಗಳನ್ನು ಬಿಡುತ್ತದೆ. ಅದರ ಬಳಿಯಲ್ಲಿಯೇ ಇರುವ ಬೇವಿನ ಮರದ ಹಣ್ಣು ಮಧುರ-ವಾಗಿಲ್ಲದಿದ್ದರೂ ಮಾವಿನ ಮರದ ಸಹವಾಸದಿಂದ ಒಂದು ರೀತಿಯ ಸುವಾಸನೆಯು ಅದರಲ್ಲಿಯೂ ಬರುತ್ತಾ ಇರುತ್ತದೆ. ಮಲಯಪರ್ವತದಲ್ಲಿ ಚಂದನ ವೃಕ್ಷಗಳು ಬಹಳವಾಗಿ ಬೆಳೆಯುತ್ತವೆ. ಅವುಗಳ ಸಮೀಪದಲ್ಲಿಯೇ ಬೆಳೆದ ಬೇವಿನ ಮರದಲ್ಲಿ ಯಾವ ಸುವಾಸನೆಯಿಲ್ಲದಿದ್ದರೂ ಗಂಧದ ಮರಗಳ ಗಾಳಿ ಬೇವಿನ ಮರಕ್ಕೆ ಬೀಸಿದಾಗ ಅದೂ ಸುಗಂಧಯುಕ್ತವಾಗಿದ್ದಂತೆ ಕಾಣುತ್ತದೆ. ಅದರಂತೆ ನನ್ನಲ್ಲಿ ಕವಿತಾ ಸುಗಂಧವಿಲ್ಲ . ಮಧುರ ಕಾವ್ಯವನ್ನು ನಾನು ರಚನೆ ಮಾಡಲಾರೆ. ಆದರೆ ಕೆಲವು ಪ್ರಾಜ್ಞರಾದ ಕವಿಗಳ ಜತೆಗೆ ಒಡನಾಡಿದ್ದರಿಂದ ಪೂರ್ವ ಕವಿಗಳ ಕಾವ್ಯ ಪರಿಚಯದಿಂದ ಯಾವುದೋ ಒಂದು ರೀತಿಯ ಅತ್ಯುತ್ತಮವಲ್ಲದ ಕಾವ್ಯವನ್ನು ನಾನು ರಚಿಸುತ್ತೇನೆ ಎಂದು ಕಾವ್ಯ-ಕರ್ತೃಗಳು ಸ್ವಾಹಂಕಾರಖಂಡನೆಯನ್ನು ಮಾಡಿಕೊಂಡಿರುತ್ತಾರೆ. ವಸ್ತುತಃ ಈ ಕಾವ್ಯವು ಉತ್ತಮವಾಗಿಯೇ ಅತಿರಮಣೀಯವಾದ ಮಹಾಕಾವ್ಯದ ಲಕ್ಷಣಗಳಿಂದ ಕೂಡಿ ಇರುತ್ತದೆ

**ವಿಶೇಷವಿಚಾರ** — 'ಶಕ್ತಿರ್ನಿಪುಣತಾಲೋಕಕಾವ್ಯಶಾಸ್ತ್ರಾದ್ಯವೇಕ್ಷಣಾತ್ । ಕಾವ್ಯಜ್ಞಶಿಕ್ಷಯಾಭ್ಯಾಸಃ ಇತಿ ಹೇತುಸ್ತದುದ್ಭವೇ ॥' ಎಂಬ ಕಾವ್ಯಪ್ರಕಾಶ ವಚನದಂತೆ ಶಕ್ತಿನಿಪುಣತಾ ಅಭ್ಯಾಸ ಇವು ಮೂರೂ ಸೇರಿ ಕವಿತ್ವವೆಂಬ ಕಾರ್ಯವನ್ನು ಉಂಟು ಮಾಡುತ್ತದೆ. ಇವು ಮೂರು ಇಲ್ಲದಿದ್ದರೆ ಕವಿತ್ವವೇ ಉಂಟಾಗುವುದಿಲ್ಲ. ಕಾವ್ಯವು ಉತ್ಪನ್ನವಾದರೂ ಹಾಸ್ಯಾಸ್ಪದವಾಗುತ್ತದೆ. ಹೀಗಿದ್ದರೂ ಪೂರ್ವ ಕವಿಗಳ ಕಾವ್ಯಪರಿಚಯದಿಂದ ಮತ್ತು ಸಹವಾಸ-ದಿಂದ ಯಾವುದೋ ಒಂದು ರೀತಿಯ ಕಾವ್ಯವನ್ನು ಬರೆಯುತ್ತೇನೆಂದು ಹೇಳಿರುವುದು ವಿನಯದ್ಯೋತಕವೆಂದೇ ತಿಳಿಯಬೇಕು.

**ವಿಗ್ರಹ** —

**ಸಹಕಾರದ್ರುಸಾನ್ನಿಧ್ಯಾತ್** — ಸಹಕಾರ ಇತಿ ದ್ರುಃ ಸಹಕಾರದ್ರುಃ, ಸನ್ನಿಧಿರೇವ ಸಾನ್ನಿಧ್ಯಂ, ಸಹಕಾರದ್ರೋಃ ಸಾನ್ನಿಧ್ಯಂ ಸಹಕಾರದ್ರುಸಾನ್ನಿಧ್ಯಂ, ತಸ್ಮಾತ್ । (ಪಾಟೀರಾಣಾಂ ಗಿರಿಃ = ಪಾಟೀರಗಿರಿಃ, ಪಾಟೀರಗಿರೇಃ ಸಾನ್ನಿಧ್ಯಂ, ತಸ್ಮಾತ್ ।)

**ನಿಂಬದ್ರುಃ** — ನಿಂಬ ಇತಿ ದ್ರುಃ ನಿಂಬದ್ರುಃ।

**ಸೌರಭಮ್** — ಸುರಭೇಃ ಭಾವಃ ಸೌರಭಮ್।

**ಕ್ರಿಯಾಪದ** —

ಕಲಗತೌ ಸಂಖ್ಯಾನೇ ಚ ಇತಿ (ಗತಿಸಂಖ್ಯಾನಾರ್ಥಕಾತ್) ಕಲಧಾತೋಃ ಸಕರ್ಮಕಾತ್ ಆತ್ಮನೇಪದಿನಃ ವರ್ತಮಾನೇ ಲಟ್ ಉತ್ತಮಪುರುಷೇ ಏಕವಚನೇ 'ಕಲಯೇ' ಇತಿ ರೂಪಮ್ ।

ಕಲಯತೇ, ಕಲಯೇತೇ, ಕಲಯಂತೇ ।
ಕಲಯಸೇ, ಕಲಯೇಥೇ, ಕಲಯಧ್ವೇ ।
ಕಲಯೇ, ಕಲಯಾವಹೇ, ಕಲಯಾಮಹೇ ।

(ಕಲಿವಲೀ ಕಾಮಧೇನೂ, ಕಲಕಾಮಧೇನೌ), ಕಾಮಧೇನುವತ್ ಸರ್ವಾರ್ಥಪ್ರದಃ ಎಂಬ ವಚನವಿರುವುದರಿಂದ ಕಲಧಾತುವಿಗೆ ಸಂದರ್ಭಾನುಗುಣವಾಗಿ ಎಷ್ಟು ಅರ್ಥವನ್ನು ಬೇಕಾದರೂ ಹೇಳಬಹುದು. ಪ್ರಕೃತದಲ್ಲಿ ರಚಿಸುವುದು ನಿರ್ಮಿಸುವುದು ಎಂದು ಅರ್ಥ.

**ಪ್ರಯೋಗ—** ಅಹಂ ಕಿಂಚಿತ್ ಕವನಂ ಕಲಯೇ । (ಕರ್ತರಿ).
ಮಯಾ ಕಿಂಚಿತ್ ಕವನಂ ಕಲ್ಯತೇ । (ಕರ್ಮಣಿ).

**ಅಲಂಕಾರ** —ಇಲ್ಲಿ ಸ್ಪಷ್ಟವಾಗಿ ಉಪಮಾಲಂಕಾರವಿದೆ. ಕವಿ ಉಪಮೇಯ, ನಿಂಬದ್ರು ಉಪಮಾನ, ಇವ ಉಪಮಾವಾಚಕ ಶಬ್ದ, ಕವಿಗಳ ಸಹವಾಸದಿಂದ ಕವನಕಲನ = ಕವಿತಾ ನಿರ್ಮಾಣ ಮಾಡುವುದು ಉಪಮೇಯದ ಧರ್ಮ, ಸಹಕಾರ ವೃಕ್ಷದ (ಅಥವಾ ಚಂದನ ಪರ್ವತದ) ಸಾನ್ನಿಧ್ಯದಿಂದ ಸೌರಭಪ್ರಾಪ್ತಿಯು ಉಪಮಾನಗತ ಧರ್ಮ; ಈ ಎರಡು ಧರ್ಮಗಳಿಗೂ ಪರಸ್ಪರ ಭೇದವಿದೆ. ಹಾಗಿದ್ದರೂ ಈ ಎರಡು ಧರ್ಮಗಳಿಗೆ ಬಿಂಬ ಪ್ರತಿಬಿಂಬ ಭಾವದಿಂದ ಅಭೇದಾಧ್ಯವಸಾನ (ಅಭೇದ ನಿಶ್ಚಯ) ಮಾಡಿಕೊಂಡು ಸಾಧಾರಣ ಧರ್ಮತ್ವವನ್ನು ಇಟ್ಟುಕೊಳ್ಳಬೇಕು. 'ವಸ್ತುತಃ ಭಿನ್ನಯೋಃ ಅಪಿ ಉಪಮಾನೋಪೇಯಧರ್ಮಯೋಃ ಪರಸ್ಪರಸಾದೃಶ್ಯಾತ್ ಅಭಿನ್ನಯೋಃ (ಅಭಿನ್ನತಯಾ ಅಧ್ಯವಸಿತಯೋಃ) ಪೃಥಗುಪಾದಾನಂ ಬಿಂಬಪ್ರತಿಬಿಂಬಭಾವಃ ಇತ್ಯಾಲಂಕಾರಿಕಸಮಯಃ' ಉಪಮಾನಗತ ಧರ್ಮಕ್ಕೂ ಉಪಮೇಯಗತ ಧರ್ಮಕ್ಕೂ, ವಾಸ್ತವಿಕವಾಗಿ ಅತ್ಯಂತಭೇದವಿದ್ದರೂ ಅವುಗಳಿಗಿರುವ ಪರಸ್ಪರ ಸಾದೃಶ್ಯದಿಂದ ಅಭೇದವನ್ನು ನಿಶ್ಚಯಿಸಿ ಅವುಗಳನ್ನು ಪ್ರತ್ಯೇಕ ಶಬ್ದಗಳಿಂದ ಹೇಳುವುದೇ ಬಿಂಬ ಪ್ರತಿಬಿಂಬ ಭಾವ. ಅದು ಈ ಶ್ಲೋಕದಲ್ಲಿರುವ ಎರಡು ಧರ್ಮಗಳಿಗಿದೆ.



**ಅವತಾರಿಕಾ —** ಪ್ರಯೋಜನವಿಲ್ಲದುದರಿಂದ ಈ ಕಾವ್ಯವು ವ್ಯರ್ಥ ಎಂಬ ಆಶಂಕೆಯನ್ನು 'ಪ್ರಾಪ್ತಾನ್ಯ' — ಎಂಬ ಹದಿನೈದನೆಯ ಪದ್ಯದಿಂದ ಪರಿಹರಿಸಿದ್ದಾರೆ. ಮನುಷ್ಯಸ್ತುತಿ ಮೂಲಕ ಬಂದಿರುವ ಪಾಪಪರಿಹಾರವೇ ಗುರ್ವಂತರ್ಯಾಮಿ ಭಗವಂತನ ಸ್ತುತಿ ರೂಪವಾದ ಈ ಕಾವ್ಯಕ್ಕೆ ಫಲವೆಂದು ಹೇಳಿದ್ದಾರೆ . ಕೇವಲ ಇಷ್ಟು ಮಾತ್ರವೇ ಫಲವಲ್ಲ, ಈ ಕಾವ್ಯಕ್ಕೆ ದೃಷ್ಟವಾದ (ಪ್ರತ್ಯಕ್ಷವಾದ) ಫಲವೂ, ಅದೃಷ್ಟವಾದ ಪಾರತ್ರಿಕಫಲವೂ ಇದೆ ಎಂದು ಈಗ 'ದೃಷ್ಟಂ ಗುರುಪ್ರಸದನಂ' ಎಂಬ ಪದ್ಯದಿಂದ ಸಮರ್ಥಿಸುತ್ತಾರೆ.

**ದೃಷ್ಟಂ ಗುರುಪ್ರಸದನಮದೃಷ್ಟಂ ಚ ಫಲಂ ಕೃತೇಃ ।**
**ಯಥಾ ಸ್ವಿಷ್ಟಕೃತೋ ಬ್ರಹ್ಮಸೂತ್ರಾದ್ಯಪ್ರಣವಸ್ಯ ಚ ॥ 17 ॥**

**ಪದಚ್ಛೇದ** — ದೃಷ್ಟಂ, ಗುರುಪ್ರಸದನಂ, ಅದೃಷ್ಟಂ, ಚ, ಫಲಂ, ಕೃತೇಃ, ಯಥಾ, ಸ್ವಿಷ್ಟಕೃತಃ, ಬ್ರಹ್ಮಸೂತ್ರಾದ್ಯಪ್ರಣವಸ್ಯ, ಚ ।

**ಅನ್ವಯ** — ಯಥಾ ಸ್ವಿಷ್ಟಕೃತಃ ಬ್ರಹ್ಮಸೂತ್ರಾದ್ಯಪ್ರಣವಸ್ಯ ಚ (ತಥಾ) (ಮಮ) ಕೃತೇಃ, ಗುರುಪ್ರಸದನಂ, ದೃಷ್ಟಂ ಫಲಂ ಚ ಅದೃಷ್ಟಂ (ಫಲಮ್) ।

**ಅನ್ವಯಾರ್ಥ** — (ಬಾಲಬೋಧಿನೀ ವ್ಯಾಖ್ಯಾನದಂತೆ)

**ಯಥಾ** = ಹೇಗೆ,

**ಸ್ವಿಷ್ಟಕೃತಃ** = 'ಸ್ವಿಷ್ಟಕೃತ್' ಎಂಬ ಹೋಮಕ್ಕೆ,

**ಬ್ರಹ್ಮಸೂತ್ರಾದ್ಯಪ್ರಣವಸ್ಯ ಚ** = ಬ್ರಹ್ಮಸೂತ್ರದಲ್ಲಿರುವ ಮೊದಲನೆಯ ಓಂಕಾರಕ್ಕೂ (ದೃಷ್ಟಾದೃಷ್ಟ ಫಲವಿದೆಯೋ)

(**ತಥಾ** = ಅದರಂತೆ)

(**ಮಮ** = ನನ್ನ)

**ಕೃತೇಃ** = ಕಾವ್ಯಕ್ಕೆ

**ಗುರುಪ್ರಸದನಂ** = ಶ್ರೀರಾಘವೇಂದ್ರಗುರುಗಳ ಅನುಗ್ರಹವು,

**ದೃಷ್ಟಂ ಫಲಂ** = ಪ್ರತ್ಯಕ್ಷ ಫಲವು,

**ಚ** = ಮತ್ತು,

**ಅದೃಷ್ಟಂ ಚ** = (ಅದೃಷ್ಟ ಫಲವೂ) ಪುಣ್ಯವೂ (ಫಲಂ = ಪ್ರಯೋಜನವು).

**ತಾತ್ಪರ್ಯ** — ಹೋಮಗಳ ಕೊನೆಯಲ್ಲಿ ಸ್ವಿಷ್ಟಕೃತ್ ಎಂಬ ಹೋಮವಿದೆ.

'ಯದಸ್ಯ ಕರ್ಮಣೋತ್ಯರೀರಿಚಂ ಯದ್ವಾ ನ್ಯೂನಮಿಹಾರಕಮ್ ।
ಅಗ್ನಿಸ್ತತ್ ಸ್ವಿಷ್ಟಕೃದ್ ವಿದ್ವಾನ್ ಸರ್ವಂ ಸ್ವಿಷ್ಟಂ ಸುಹುತಂ ಕರೋತು ಸ್ವಾಹಾ ॥'

ಎಂದು ಸ್ವಿಷ್ಟಕೃದ್ ಹೋಮದ ಮಂತ್ರ. ನಾನು ಹೋಮಕಾಲದಲ್ಲಿ ಏನಾದರೂ ನ್ಯೂನಾತಿರೇಕಗಳನ್ನು ಮಾಡಿರಬಹುದು.ಅದನ್ನು ಪರಿಹರಿಸಿ ಈ ಹೋಮವು ಸರಿಯಾಗಿ ಹೋಮಿಸಲ್ಪಟ್ಟಂತೆ ಆಗಿ ಸಫಲವಾಗುವಂತೆ ಜ್ಞಾನಿಯಾದ ಅಗ್ನಿಯು ಅನುಗ್ರಹಿಸಲಿ' ಎಂದು ಈ ಮಂತ್ರದ ಅಭಿಪ್ರಾಯ. ಇಲ್ಲಿ ಮಂತ್ರೋಚ್ಚಾರಣ, ಅನಂತರ ಹವಿಃಪ್ರಕ್ಷೇಪ, (ತುಪ್ಪ ಮುಂತಾದ್ದನ್ನು ಅಗ್ನಿಯಲ್ಲಿ ಅರ್ಪಿಸುವುದು) ನ ಮಮ, (ಈ ಅರ್ಪಿಸಿದ ಆಹುತಿಯು ನನ್ನದಲ್ಲ ) ಎಂಬ ತ್ಯಾಗ, ಎಂದು ಮೂರು ಅಂಶಗಳಿವೆ. ಇವುಗಳಲ್ಲಿ ಮಂತ್ರೋಚ್ಚಾರಣ, ಮತ್ತು ಹವಿಸ್ಸನ್ನು ಅಗ್ನಿಯಲ್ಲಿ ಅರ್ಪಿಸುವುದು ಎಂಬ ಎರಡು ಅಂಶಕ್ಕೆ ಪ್ರತ್ಯಕ್ಷವಾದ ಫಲವಿದೆ. 'ನ ಮಮ' ಎಂಬ ತ್ಯಾಗಾಂಶಕ್ಕೆ ಅದೃಷ್ಟವೇ ಫಲ. ಹೀಗೆ ಸ್ವಿಷ್ಟಕೃದ್ ಹೋಮಕ್ಕೆ ದೃಷ್ಟಾದೃಷ್ಟ ಫಲಗಳಿವೆ.

ಬ್ರಹ್ಮಸೂತ್ರಗಳಲ್ಲಿ ಮೊದಲನೆಯ ಸೂತ್ರವು 'ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ' ಎಂಬುದು. ಇದರಲ್ಲಿರುವ ಮೊದಲನೆಯ ಓಂಕಾರಾರ್ಥವು ಬ್ರಹ್ಮಶಬ್ದಾರ್ಥದ ಜೊತೆಗೆ ಅನ್ವಯಿಸುತ್ತದೆ. 'ಅನ್ವಯಪ್ರತಿಯೋಗ್ಯರ್ಥ-ಸಮರ್ಪಕತ್ವ' ಅಂದರೆ ಬ್ರಹ್ಮಶಬ್ದವು ರೂಢಿಯಿಂದ ವಿಷ್ಣು ಎಂಬ ಅರ್ಥವನ್ನು ಬೋಧಿಸುತ್ತದೆ. ಓಂ ಶಬ್ದವು ಗುಣಪೂರ್ಣ ಎಂಬ ಅರ್ಥವನ್ನು ಬೋಧಿಸುತ್ತದೆ. ಗುಣಪೂರ್ಣ ಎಂಬ 'ಓಂ' ಅರ್ಥಕ್ಕೆ ರೂಢ್ಯರ್ಥವಾದ ವಿಷ್ಣುವಿನಲ್ಲಿ ಅಭೇದದಿಂದ ಅನ್ವಯವಿದೆ. ಆದುದರಿಂದ ಅಭೇದಾನ್ವಯಕ್ಕೆ ಪ್ರತಿಯೋಗಿಯಾದ (ಸಂಬಂಧಿ-ಯಾದ) ಗುಣಪೂರ್ಣ ಎಂಬ ಅರ್ಥವನ್ನು ಸಮರ್ಪಿಸುವುದು ಎಂಬ ದೃಷ್ಟವಾದ (ಪ್ರತ್ಯಕ್ಷವಾದ) ಪ್ರಯೋಜನವು ಓಂ ಶಬ್ದಕ್ಕೆ ಬಂದಿತು.

'ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ' ಆದಿಯಲ್ಲಿ ಓಂಕಾರವನ್ನು ಹೇಳದಿದ್ದರೆ ಬ್ರಹ್ಮ ಎಂದರೆ ವೇದ ಮತ್ತು ವೇದಾರ್ಥನಿರ್ಣಾಯಕವಾದ ಬ್ರಹ್ಮಸೂತ್ರವೂ ಸ್ರವಿಸುತ್ತದೆ, ಅದರ ಫಲವು ಸ್ರವಿಸಿ ಹೋಗುತ್ತದೆ.

ಕೊನೆಯಲ್ಲಿ ಓಂಕಾರವನ್ನು ಹೇಳದಿದ್ದರೆ ವಿಶರಣ ಅಂದರೆ ಫಲದ ನಾಶವುಂಟಾಗುತ್ತದೆ ಎಂಬ ಅರ್ಥವುಳ್ಳ ಈ ನಿಂದಾರ್ಥವಾದದಿಂದಲೂ ಮೊದಲು ಓಂಕಾರವನ್ನುಚ್ಚರಿಸಬೇಕು. ಹೀಗೆ ಸೂತ್ರದ ಮೊದಲಲ್ಲಿರುವ ಓಂಕಾರವು ಹಿಂದೆ ಹೇಳಿದ ದೃಷ್ಟಫಲವನ್ನು ನಿಂದಾರ್ಥವಾದದಿಂದ ಪ್ರಾಪ್ತವಾದ ಆದಿಯಲ್ಲಿ ಮಾಡುವ ಉಚ್ಚಾರಣದಿಂದ ಸ್ರವಣ ವಿಶರಣಾಭಾವಗಳು ಉಂಟಾಗಿ ಬ್ರಹ್ಮವಿದ್ಯೆಯ ತೇಜಸ್ವಿತೆ (ವೀರ್ಯವಂತಿಕೆ) ಎಂಬ ಅದೃಷ್ಟಫಲವನ್ನು ಉಂಟುಮಾಡುತ್ತದೆ. ಇದರಂತೆ ಈ ಪ್ರಕೃತ ಮಹಾಕಾವ್ಯಕ್ಕೆ ಶ್ರೀರಾಘವೇಂದ್ರತೀರ್ಥ ಗುರುಸಾರ್ವಭೌಮರ ಪರಮಾನುಗ್ರಹವೆಂಬ ಪ್ರತ್ಯಕ್ಷಫಲವೂ, ಈ ಕಾವ್ಯಾರ್ಥಾನುಸಂಧಾನದಿಂದ ಗುರ್ವಂತರ್ಯಾಮಿಭಗವಂತನ ಪ್ರಸಾದವೆಂಬ ಅದೃಷ್ಟಫಲವೂ ಇದೆ. ದೃಷ್ಟಾದೃಷ್ಟ ಫಲಗಳಿರುವುದರಿಂದ ಈ ಕಾವ್ಯವನ್ನು ಸಜ್ಜನರು ಪರಿಗ್ರಹಿಸ-ಬೇಕು ಎಂದು ಭಾವ.

ಈ ಅಭಿಪ್ರಾಯ ಇಟ್ಟುಕೊಂಡಾಗ 'ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ' ಎಂದು ಸೂತ್ರದ ಅಕಾರದ ಮೊದಲು ಒಂದೇ ಓಂಕಾರ. ಒಂದೇ ಓಂಕಾರವು ದೃಷ್ಟಫಲವನ್ನೂ ಅದೃಷ್ಟಫಲವನ್ನೂ ಉಂಟುಮಾಡುತ್ತದೆ.

(ಶ್ರೀರಾಘವೇಂದ್ರಗುರುಸಾರ್ವಭೌಮರಿಂದ ರಚಿತವಾಗಿರುವ ಬ್ರಹ್ಮಸೂತ್ರಾರ್ಥಗಳ ವಿವರಣೆಯ ರೂಪ-ವಾದ ತಂತ್ರದೀಪಿಕೆಯನ್ನು ನೋಡಿ ತಿಳಿಯಬಹುದು.)

**ವಿಶೇಷಾಂಶ** — ಒಂದೇ ಸ್ವಿಷ್ಟಕೃದ್ ಯಾಗ ಉತ್ತಮ ಪ್ರಯಾಜ ಪಶು ಪುರೋಡಾಶಾದಿಗಳಿಗೆ ದೃಷ್ಟಾ-ದೃಷ್ಟಫಲವಿದೆಯೆಂದು ಪೂರ್ವಮೀಮಾಂಸಾ ನಾಲ್ಕನೆಯ ಅಧ್ಯಾಯದ ಮೊದಲನೆಯ ಪಾದದ ಏಳನೆಯ ಅಧಿಕರಣದಲ್ಲಿ ಹೇಳಿದೆ. (4-1-7) ಒಂದೇ ಕರ್ಮವು ಅಂಶಭೇದದಿಂದ ಬೇರೆ ಬೇರೆ ಪ್ರಯೋಜನವನ್ನು ಉಂಟುಮಾಡುವುದು ವಿರುದ್ಧವಲ್ಲ ಸ್ವಿಷ್ಟಕೃದ್ ಯಾಗದಲ್ಲಿರುವ ಮಂತ್ರಪಾಠ, ದ್ರವ್ಯಪ್ರಕ್ಷೇಪ, ದೇವತೋ-ದ್ದೇಶದಿಂದ ದ್ರವ್ಯತ್ಯಾಗ ಎಂಬ ಮೂರು ಅಂಶಗಳಲ್ಲಿ ಮಂತ್ರ ಮತ್ತು ಹವಿಃಪ್ರಕ್ಷೇಪಾಂಶಗಳಿಂದ , ದೇವತಾಸ್ಮರಣ ಮತ್ತು ದ್ರವ್ಯ ಪ್ರತಿಪತ್ತಿ (ದ್ರವ್ಯದ ವಿನಿಯೋಗ) ಎಂಬ ದೃಷ್ಟಪ್ರಯೋಜನವು ಇರುವುದಾದರೂ ತ್ಯಾಗಾಂಶಕ್ಕೆ (ನ ಮಮ) ಎಂಬ ಅಂಶಕ್ಕೆ ಪ್ರತ್ಯಕ್ಷಫಲವು ಇಲ್ಲದ್ದರಿಂದ ಅಪ್ರತ್ಯಕ್ಷವಾದ ಅಪೂರ್ವವೇ ಫಲವೆಂದು ಕಲ್ಪಿಸಬೇಕು. ಆದುದರಿಂದ ಸ್ವಿಷ್ಟಕೃದಾದಿಗಳು ದೃಷ್ಟಾದೃಷ್ಟಫಲಗಳುಳ್ಳವುಗಳು. (ಶ್ರೀಗುರುಸಾರ್ವಭೌಮಕೃತ ಭಾಟ್ಟಸಂಗ್ರಹ. 196ನೇ ಪುಟ, ಬೃಂದಾವನ ಸಂಸ್ಥಾ, ಮಂತ್ರಾಲಯ, ಇಲ್ಲಿಂದ ಪ್ರಕಾಶಿತ.)

**ಅನ್ವಯಾರ್ಥ** — *(ಗುರುಪಾದಸೇವಾ ವ್ಯಾಖ್ಯಾನ ಪ್ರಕಾರ)*

**ಯಥಾ** = ಹೇಗೆ,

**ಸ್ವಿಷ್ಟಕೃತಃ** = ಸ್ವಿಷ್ಟಕೃತ್ ಎಂಬ ಹೋಮಕ್ಕೆ

(**ದೃಷ್ಟಂ ಫಲಂ** = ದೇವತಾ ಸ್ಮರಣಾದಿರೂಪದೃಷ್ಟಫಲವಿದೆಯೋ)

**ಚ** = ಮತ್ತು

**ಬ್ರಹ್ಮಸೂತ್ರಾದ್ಯಪ್ರಣವಸ್ಯ** = ಬ್ರಹ್ಮಸೂತ್ರಗಳಲ್ಲಿ ಮೊದಲನೆಯ ಸೂತ್ರದ ಮೊದಲಲ್ಲಿರುವ ಓಂಕಾರಕ್ಕೆ

(**ಅದೃಷ್ಟಂ ಫಲಂ** = ಅದೃಷ್ಟಫಲವೂ ಇದೆ)

(**ತಥಾ** = ಹಾಗೆಯೇ)

**ಕೃತೇಃ** = (ನನ್ನ) ಕಾವ್ಯಕ್ಕೆ

**ಗುರುಪ್ರಸದನಂ** = ಗುರುಗಳ ಅನುಗ್ರಹವು

**ದೃಷ್ಟಂಫಲಂ** = ಪ್ರತ್ಯಕ್ಷಫಲವು

**ಚ** = ಮತ್ತು

**ಅದೃಷ್ಟಂ ಫಲಂ** = ಜ್ಞಾನ ಭಗವಂತನ ಪ್ರಸಾದ ಇವುಗಳ ಮೂಲಕ ಮೋಕ್ಷವೆಂಬ ಫಲವೂ

(**ಅಸ್ತಿ** = ಇದೆ.)

**ತಾತ್ಪರ್ಯ** — 'ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ' ಎಂಬುದು ಬ್ರಹ್ಮಸೂತ್ರಗಳಲ್ಲಿ ಮೊದಲನೆಯ ಸೂತ್ರದ ಸ್ವರೂಪ. ಮೊದಲಿನ ಎರಡು ಓಂಕಾರಗಳಲ್ಲಿ ಮೊದಲನೆಯದು 'ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ' ಎಂಬ ಶ್ರೌತವಾದ ಅರ್ಥವಾದ ಬಲದಿಂದ ಪ್ರಾಪ್ತವಾದುದು, ಅದಕ್ಕೆ ಅದೃಷ್ಟವೇ ಪ್ರಯೋಜನ. ಅದರಿಂದ ಬ್ರಹ್ಮಸೂತ್ರದ ಅಧ್ಯಯನದಿಂದ ಉಂಟಾದ ಫಲವು ಸೋರಿಹೋಗುವುದಿಲ್ಲ. (ಇದೇ ಸ್ರವಣಾಭಾವ) (ಎರಡನೆಯ ಓಂಕಾರವು ಸೂತ್ರದಲ್ಲಿರುವ ಬ್ರಹ್ಮಪದಾರ್ಥದೊಡನೆ ಅನ್ವಯಿಸಲು ಯೋಗ್ಯವಾದ 'ಗುಣಪೂರ್ಣ' ಎಂಬ ಅರ್ಥವನ್ನು ಬೋಧಿಸುವುದರಿಂದ ಅದಕ್ಕೆ ದೃಷ್ಟಫಲವಿದೆ.) ಸ್ವಿಷ್ಟಕೃದ್ ಹೋಮಕ್ಕೆ ದ್ರವ್ಯಪ್ರಕ್ಷೇಪದಿಂದ ಯಾಗದ ವಸ್ತುವಿನ ವಿನಿಯೋಗ(ದ್ರವ್ಯ ಫಲವೆತ್ತಿ)ವೆಂಬ ದೃಷ್ಟಫಲ ಮಾತ್ರವಿದೆ. ಹೀಗೆ ಬ್ರಹ್ಮಸೂತ್ರದ ಮೊದಲನೆಯ ಓಂಕಾರಕ್ಕೆ ಅದೃಷ್ಟ ಮಾತ್ರಫಲ, ಸ್ವಿಷ್ಟಕೃದ್ ಯಾಗಕ್ಕೆ ದ್ರವ್ಯಪ್ರತಿಪತ್ತಿ ಎಂಬ ದೃಷ್ಟಫಲ ಮಾತ್ರವಿದೆ. ನನ್ನ ಈ ಕಾವ್ಯಕ್ಕಾದರೋ ಶ್ರೀಗುರುರಾಜರ ಅನುಗ್ರಹವೆಂಬ ದೃಷ್ಟಫಲವೂ, ಪರಮಾತ್ಮನ ಜ್ಞಾನಪ್ರಸಾದ ದ್ವಾರಾ, ಮೋಕ್ಷ ಫಲ. ಹೀಗೆ ಎರಡು ಫಲಗಳುಳ್ಳ ನನ್ನ ಕಾವ್ಯವು ಹೆಚ್ಚು ಗುಣವುಳ್ಳದ್ದಾಗಿದೆ ಎಂದು ಭಾವ.

ವಿಗ್ರಹ —

**ಗುರುಪ್ರಸದನಂ** — ಗುರೋಃ ಪ್ರಸದನಂ ಗುರುಪ್ರಸದನಂ ।

**ಅದೃಷ್ಟಂ** — ನ ದೃಷ್ಟಂ ಅದೃಷ್ಟಂ ।

**ಬ್ರಹ್ಮಸೂತ್ರಾದ್ಯಪ್ರಣವಸ್ಯ** — ಬ್ರಹ್ಮಣಃ ಸೂತ್ರಂ ಬ್ರಹ್ಮಸೂತ್ರಂ, ಬ್ರಹ್ಮಸೂತ್ರಸ್ಯ ಆದ್ಯಪ್ರಣವಃ ಬ್ರಹ್ಮಸೂತ್ರಾದ್ಯಪ್ರಣವಃ, ತಸ್ಯ ।

(ಇಲ್ಲಿ ಶ್ಲೋಕದಲ್ಲಿ ಕ್ರಿಯಾಪದವಿಲ್ಲ, ಅಸ್ತಿ ಎಂಬ ಕ್ರಿಯೆಯನ್ನು ಅಧ್ಯಾಹಾರ ಮಾಡಿಕೊಳ್ಳಬೇಕು).

**ಅಲಂಕಾರ** — ಬ್ರಹ್ಮಸೂತ್ರಗಳ ಮೊದಲನೆಯ ಸೂತ್ರದ ಓಂಕಾರ ಮತ್ತು ಸ್ವಿಷ್ಟಕೃದ್ ಯಾಗಕ್ಕೆ ದೃಷ್ಟಾದೃಷ್ಟ ಫಲವಿದ್ದಂತೆ ನನ್ನ ಕಾವ್ಯಕ್ಕೂ ದೃಷ್ಟಾದೃಷ್ಟ ಫಲಗಳಿವೆ ಎಂದು ಹೇಳಿರುವುದರಿಂದ ಇಲ್ಲಿ ಉಪಮಾಲಂಕಾರವಾಗುತ್ತದೆ. ಎರಡನೆಯ ವ್ಯಾಖ್ಯಾನದಲ್ಲಿ ವ್ಯತಿರೇಕಾಲಂಕಾರ ವ್ಯಂಗ್ಯವಾಗುತ್ತದೆ.

★ ★ ★

**ಅವತಾರಿಕಾ** — ನನ್ನ ಈ ಕೃತಿಗೆ ಗುರುಪ್ರಸಾದವು ದೃಷ್ಟಫಲವೆಂದು ಹೇಳಿದ್ದಾಯಿತು. ಈ ಗುರುಪ್ರಸಾದವು ಅಪ್ರಯೋಜಕ, ಬೇಕಾಗಿಲ್ಲ ಎಂದರೆ ಅದು ಸರಿಯಲ್ಲ, ಗುರುಪ್ರಸಾದವಾದರೆ ಶ್ರೇಯಸ್ಸಿನ ಪ್ರಾಪ್ತಿ. ಅದು ಇಲ್ಲದಿದ್ದರೆ ಶ್ರೇಯಸ್ಸಿನ ಪ್ರಾಪ್ತಿಯಿಲ್ಲವಾದುದರಿಂದ ಗುರುಪ್ರಸಾದವು ಆವಶ್ಯಕವೆನ್ನುತ್ತಾರೆ —

**ಶ್ರೇಯಾಂಸಿ ಶ್ರಯತೇ ಕೋ ವಾ ಪ್ರಸಾದೇನ ವಿನಾ ಗುರೋಃ ।**
**ಕೈವಲ್ಯಮಿವ ಗೋವಿಂದಕಾರುಣ್ಯೇನ ವಿನಾ ಜನಾಃ ॥ 18 ॥**

**ಪದಚ್ಛೇದ** — ಶ್ರೇಯಾಂಸಿ, ಶ್ರಯತೇ, ಕಃ, ವಾ, ಪ್ರಸಾದೇನ, ವಿನಾ, ಗುರೋಃ, ಕೈವಲ್ಯಂ, ಇವ, ಗೋವಿಂದಕಾರುಣ್ಯೇನ, ವಿನಾ, ಜನಃ ।

**ಅನ್ವಯ** — ಗೋವಿಂದಕಾರುಣ್ಯೇನ ವಿನಾ ಕೈವಲ್ಯಮಿವ ಗುರೋಃ ಪ್ರಸಾದೇನ ವಿನಾ ಕೋ ವಾ ಜನಃ ಶ್ರೇಯಾಂಸಿ ಶ್ರಯತೇ ।

**ಅನ್ವಯಾರ್ಥ** —

**ಗೋವಿಂದಕಾರುಣ್ಯೇನ — ಗೋವಿಂದ** = ವೇದಪ್ರತಿಪಾದ್ಯನಾದ ಪರಮಾತ್ಮನ, **ಕಾರುಣ್ಯೇನ** = ದಯೆಯಿಂದ,

**ವಿನಾ** = ಹೊರತಾಗಿ,

**ಕೈವಲ್ಯಂ ಇವ** = ಮೋಕ್ಷವನ್ನೆಂಬಂತೆ (ಕೈವಲ್ಯಂ ಯಥಾ ನ ಲಭ್ಯತೇ)

**ಗುರೋಃ** = ಗುರುಗಳ

**ಪ್ರಸಾದೇನ ವಿನಾ** = ಅನುಗ್ರಹವಿಲ್ಲದೆ

**ಕೋ ವಾ ಜನಃ** = ಯಾವ ಮನುಷ್ಯನು ತಾನೇ

**ಶ್ರೇಯಾಂಸಿ** = ಪುರುಷಾರ್ಥಗಳನ್ನು (ಮಂಗಳಕರಗಳಾದ ಫಲಗಳನ್ನು)

**ಶ್ರಯತೇ** = ಹೊಂದುತ್ತಾನೆ.

**ತಾತ್ಪರ್ಯ** — 'ಅಹಂ ಭೋಗಪ್ರದೋ ವತ್ಸ ಮೋಕ್ಷದಸ್ತು ಜನಾರ್ದನಃ' ಮಗೂ, ಸುಬ್ರಹ್ಮಣ್ಯ, ನಾನು ಭಜಿಸಿದವರಿಗೆ ಇಹಲೋಕದ ಭಾಗ್ಯವನ್ನು ಮಾತ್ರ ಕೊಡತಕ್ಕವನು, ಮೋಕ್ಷವನ್ನು ಕೊಡುವವನು ಜನಾರ್ದನನು ಎಂಬ ಈಶ್ವರನ ಮಾತಿನಿಂದಲೂ,

'ಆರೋಗ್ಯಂ ಭಾಸ್ಕರಾದಿಚ್ಛೇತ್ ಶ್ರಿಯಮಿಚ್ಛೇದ್ ಹುತಾಶನಾತ್ ।
ಜ್ಞಾನಂ ಮಹೇಶ್ವರಾದಿಚ್ಛೇತ್ ಮೋಕ್ಷಮಿಚ್ಛೇಜ್ಜನಾರ್ದನಾತ್ ॥'

'ಸೂರ್ಯನಿಂದ ಆರೋಗ್ಯವನ್ನು ಪ್ರಾರ್ಥಿಸಬೇಕು, ಅಗ್ನಿಪುರುಷನಿಂದ ಸಂಪತ್ತನ್ನೂ, ಮಹೇಶ್ವರನಿಂದ ಜ್ಞಾನವನ್ನೂ, ಜನಾರ್ದನನಿಂದ ಮೋಕ್ಷವನ್ನು ಇಚ್ಛಿಸಬೇಕು' ಎಂಬ ಉಕ್ತಿಯಂತೆಯೂ, 'ತಮೇವಂ ವಿದ್ವಾನಮೃತ ಇಹ ಭವತಿ ನಾನ್ಯಃ ಪಂಥಾ ವಿದ್ಯತೇ ಅಯನಾಯ', ಪರಮಾತ್ಮನನ್ನು ಸಹಸ್ರಶೀರ್ಷತ್ವಾದಿ ಗುಣಯುಕ್ತನನ್ನಾಗಿ ತಿಳಿದವನೇ ಮೋಕ್ಷವನ್ನು ಪಡೆಯುತ್ತಾನೆ, ಮೋಕ್ಷಕ್ಕೆ ಬೇರೆ ದಾರಿಯಲ್ಲಿ ಎಂಬ ಉಕ್ತಿಯಂತೆಯೂ, ವೇದಪುರಾಣಾದಿ ಪ್ರತಿಪಾದ್ಯನಾದ ಶ್ರೀಹರಿಯ ಕರುಣೆಯಿಲ್ಲದೆ ಮೋಕ್ಷವು ದೊರೆಯುವುದಿಲ್ಲ, ಹಾಗೆಯೇ ಗುರುಗಳ ಪ್ರಸಾದವಿಲ್ಲದೆಯೂ ಪುರುಷಾರ್ಥಗಳ ಪ್ರಾಪ್ತಿಯಾಗುವುದಿಲ್ಲ, ಮೋಕ್ಷವೆಂಬ ಶ್ರೇಯಃಪ್ರಾಪ್ತಿಯೂ ಆಗುವುದಿಲ್ಲ. 'ಅಪ್ಯಚ್ಯುತೋ ಗುರುದ್ವಾರಾ ಪ್ರಸಾದಕೃದಹಂ ತ್ವಿತಿ' ನಾನೇ ಸ್ವತಃ ಪ್ರಸಾದವನ್ನುಂಟು ಮಾಡಿ ಮೋಕ್ಷವನ್ನು ಕೊಡಬಲ್ಲೆನಾದರೂ ಗುರುಗಳ ಅನುಗ್ರಹವನ್ನುಂಟು ಮಾಡಿ ಅದರ ಮೂಲಕವೇ ಮೋಕ್ಷವನ್ನು ಕೊಡುತ್ತೇನೆ ಎಂಬುದು ನನ್ನ ಸಂಕಲ್ಪ, ಎಂಬ ಪರಮಾತ್ಮನ ಮಾತಿನಂತೆ ಶ್ರೇಯಸ್ಸಿನ ಪ್ರಾಪ್ತಿಗೆ ಗುರುಗಳ ಅನುಗ್ರಹವೂ ಅತ್ಯಾವಶ್ಯಕ ಆದುದರಿಂದ ಗುರುಗಳ ಪ್ರಸಾದವು ಅನಾವಶ್ಯಕ ಎಂದು ಶಂಕಿಸಬಾರದು. ಗುರುಪ್ರಸಾದವಿದ್ದರೆ ಮಾತ್ರ ಶ್ರೇಯಸ್ಸಿನ ಪ್ರಾಪ್ತಿ, ಗುರುಪ್ರಸಾದವಿಲ್ಲದಿದ್ದರೆ ಶ್ರೇಯಸ್ಸು ಉಂಟಾಗುವುದಿಲ್ಲ, ಎಂಬ ರೀತಿಯಿಂದ ಅನ್ವಯ ವ್ಯತಿರೇಕಗಳು ಕಂಡುಬರುವುದರಿಂದ ಗುರುಪ್ರಸಾದವು ಅತ್ಯಾವಶ್ಯಕ ಎಂದು ಅಭಿಪ್ರಾಯ.

**ವಿಗ್ರಹ —**

**ಗೋವಿಂದಕಾರುಣ್ಯೇನ —** **ಕಾರುಣ್ಯಂ** - ಕರುಣಾ ಏವ ಕಾರುಣ್ಯಂ । **ಗೋವಿಂದಃ** - ಗೋವಿಂದಸ್ಯ ಕಾರುಣ್ಯಂ, ತೇನ । ಗಾಃ ಪ್ರತಿಪಾದಕ್ತ್ವೇನ ವಿಂದತೇ, ಇತಿ ವಾ, ಗೋಭಿಃ ವಿದ್ಯತೇ ಇತಿ ವಾ ಗೋವಿಂದಃ ।

**ಕ್ರಿಯಾಪದ —**

ಶ್ರಿಞ್ ಸೇವಾಯಾಂ ಇತಿ ಸೇವಾರ್ಥಕಾತ್ ಶ್ರಿಧಾತೋಃ ಸಕರ್ಮಕಾತ್ ಕರ್ತರಿ ಆತ್ಮನೇಪದಿನಃ ವರ್ತಮಾನೇ ಲಟ್, ಪ್ರಥಮಪುರುಷ ಏಕವಚನೇ 'ಶ್ರಯತೇ' ಇತಿ ರೂಪಮ್ ।

ಶ್ರಯತೇ, ಶ್ರಯೇತೇ, ಶ್ರಯಂತೇ ।
ಶ್ರಯಸೇ, ಶಯೇಥೇ, ಶ್ರಯಧ್ವೇ ।
ಶ್ರಯೇ , ಶ್ರಯಾವಹೇ, ಶ್ರಯಾಮಹೇ ।

**ಪ್ರಯೋಗ —** ಕೋ ವಾ ಜನಃ ಶ್ರೇಯಾಂಸಿ ಶ್ರಯತೇ । (ಕರ್ತರಿ).
ಕೇನ ವಾ ಜನೇನ ಶ್ರೇಯಾಂಸಿ ಶ್ರೀಯಂತೇ । (ಕರ್ಮಣೀ).

**ಅಲಂಕಾರ —** ವ್ಯತಿರೇಕದಿಂದ ಅನುಪ್ರಣೀತವಾದ ಉಪಮಾಲಂಕಾರ, ಇಲ್ಲಿ ವಿನೋಕ್ತಿ ಅಲಂಕಾರವಲ್ಲ. ಗೋವಿಂದನ ಕರುಣೆಯಿಲ್ಲದೆ ಮುಕ್ತಿ ದೊರಕುವುದಿಲ್ಲ, ಗುರುವಿನ ಅನುಗ್ರಹವಿಲ್ಲದೆ ಶ್ರೇಯಸ್ಸು ದೊರಕುವುದಿಲ್ಲ. ಇದು ವ್ಯತಿರೇಕ, ಗೋವಿಂದನ ಕರುಣೆಯಿಲ್ಲದೆ ಮುಕ್ತಿ ಹೇಗೆ ಸಿಗುವುದಿಲ್ಲವೋ ಅದರಂತೆ ಗುರುಗಳ ಅನುಗ್ರಹ-ವಿಲ್ಲದೆ ಶ್ರೇಯಸ್ಸು ಸಿಗುವುದಿಲ್ಲ ಎಂಬುದು ಉಪಮಾಲಂಕಾರ.



**ಅವತಾರಿಕಾ —** ಮಾನವನಿಗೆ ಕವಿತಾ ಸಾಮರ್ಥ್ಯವಿದ್ದರೆ ನಮ್ಮ ಗುರುಗಳ ಸ್ತೋತ್ರ ಮಾಡಬೇಕು. ಇಲ್ಲವಾದರೆ ಆ ಕವಿತೆಯು ವ್ಯರ್ಥವೆಂದು ದೃಷ್ಟಾಂತಪೂರ್ವಕವಾಗಿ ತಿಳಿಸುತ್ತಿದ್ದಾರೆ —

**ಕವಿತಾಫಲಮನ್ಯತ್ಕಿಂ ಗುರೂಣಾಂ ಗುಣವರ್ಣನಾತ್ ।**
**ಅಪವರ್ಗಂ ವಿನಾನ್ಯತ್ಕಿಂ ಬ್ರಹ್ಮಜಿಜ್ಞಾಸನೇ ಫಲಮ್ ॥ 19 ॥**

**ಪದಚ್ಛೇದ —** ಕವಿತಾಫಲಂ, ಅನ್ಯತ್, ಕಿಂ, ಗುರೂಣಾಂ, ಗುಣವರ್ಣನಾತ್, ಅಪವರ್ಗಂ, ವಿನಾ, ಅನ್ಯತ್, ಕಿಂ, ಬ್ರಹ್ಮಜಿಜ್ಞಾಸನೇ, ಫಲಮ್ ।

**ಅನ್ವಯ —** ಗುರೂಣಾಂ ಗುಣವರ್ಣನಾತ್ ಅನ್ಯತ್ ಕವಿತಾಫಲಂ ಕಿಂ ? ಅಪವರ್ಗಂ ವಿನಾ ಬ್ರಹ್ಮ-ಜಿಜ್ಞಾಸನೇ ಅನ್ಯತ್ ಫಲಂ ಕಿಮ್ ?

**ಅನ್ವಯಾರ್ಥ —**

**ಗುರೂಣಾಂ** = ಗುರುಗಳ,

**ಗುಣವರ್ಣನಾತ್** = ಗುಣಗಳನ್ನು ಹೊಗಳುವುದಕ್ಕಿಂತ

**ಅನ್ಯತ್** = ಬೇರೆಯಾದ,

**ಕವಿತಾಫಲಂ** = ಕವಿತ್ವದ ಪ್ರಯೋಜನವು,

**ಕಿಂ** = ಯಾವುದು ?

**ಅಪವರ್ಗಂ ವಿನಾ** = ಮೋಕ್ಷವಲ್ಲದೆ

**ಬ್ರಹ್ಮಜಿಜ್ಞಾಸನೇ** = ಬ್ರಹ್ಮವಿಚಾರ ಮಾಡುವುದರಲ್ಲಿ, (ಬ್ರಹ್ಮವಿಚಾರಕ್ಕೆ)

**ಅನ್ಯತ್ ಫಲಂ ಕಿಂ** = ಬೇರೆ ಫಲ ಯಾವುದು ?

**ತಾತ್ಪರ್ಯ** — ಶ್ರವಣ, ಮನನ, ನಿದಿಧ್ಯಾಸನ ರೂಪವಾದ ಬ್ರಹ್ಮವಿಚಾರವನ್ನು ಮಾಡುವುದರಿಂದ ಪರಮಾತ್ಮನ ಅಪರೋಕ್ಷಜ್ಞಾನವನ್ನು ಪಡೆದು ಆ ಪರಮಾತ್ಮನ ಅತ್ಯುತ್ತಮ (ಪರಮ) ಪ್ರಸಾದವನ್ನು ಪಡೆದು ಮೋಕ್ಷವನ್ನು ಹೊಂದುವುದೇ ಬ್ರಹ್ಮಜಿಜ್ಞಾಸೆಗೆ ಫಲವು. ಅದರಂತೆ ಸಾತ್ತ್ವಿಕನಾದ ಮಾನವನಿಗೆ ಕವಿತಾ ಸಾಮರ್ಥ್ಯ-ವಿದ್ದಾಗ ಅದನ್ನು ಉಪಯೋಗಿಸಿಕೊಂಡು ಗುರುಗಳ ಉತ್ತಮವಾದ ಗುಣಗಳನ್ನು ವರ್ಣಿಸಬೇಕು. ಕವಿತಾ ನೈಪುಣ್ಯಕ್ಕೆ ಅದೇ ಪ್ರಯೋಜನ. ಸಾಧಾರಣಮಾನವರನ್ನು ವರ್ಣಿಸಿ ಧನವನ್ನು ಪಡೆಯುವುದಾಗಲೀ ಕೀರ್ತಿಯನ್ನು ಗಳಿಸು-ವುದಾಗಲೀ ಕವಿತಾ ಸಾಮರ್ಥ್ಯಕ್ಕೆ ಪ್ರಯೋಜನವಲ್ಲ.

**ಅಲಂಕಾರ** — ಇಲ್ಲಿ ಕವಿತೆಗೆ ಫಲ ಗುರುಗಳ ಗುಣವರ್ಣನ, (ಬಿಂಬ) ಬ್ರಹ್ಮಜಿಜ್ಞಾಸೆಗೆ ಫಲ ಮೋಕ್ಷ (ಪ್ರತಿಬಿಂಬ) ಎಂದು ಬಿಂಬ ಪ್ರತಿಬಿಂಬ ಭಾವದಿಂದ ಎರಡು ವಿಷಯಗಳನ್ನು ವರ್ಣಿಸಿದ್ದರಿಂದ ದೃಷ್ಟಾಂತಾಲಂಕಾರ. 'ಚೇದ್ ಬಿಂಬ ಪ್ರತಿಬಿಂಬತ್ವಂ ದೃಷ್ಟಾಂತಸ್ತದಲಂಕೃತಿಃ' ಎಂದು ದೃಷ್ಟಾಂತಾಲಂಕಾರದ ಲಕ್ಷಣ. 'ತ್ವಮೇವ ಕೀರ್ತಿ-ಮಾನ್ ರಾಜನ್ ವಿಧುರೇವ ಹಿ ಕಾಂತಿಮಾನ್' ಎಂದು ಉದಾಹರಣ.

ವಿಗ್ರಹ —

**ಕವಿತಾಫಲಂ** — ಕವೇಃ ಭಾವಃ (ಕರ್ಮ ವಾ)ಕವಿತಾ, ಕವಿತಾಯಾಃ ಫಲಂ ಕವಿತಾಫಲಮ್ ।

**ಗುಣವರ್ಣನಾತ್** — ಗುಣಾನಾಂ ವರ್ಣನಂ ಗುಣವರ್ಣನಂ ತಸ್ಮಾತ್ ।

**ಬ್ರಹ್ಮಜಿಜ್ಞಾಸನೇ** — ಬ್ರಹ್ಮಣಃ ಜಿಜ್ಞಾಸನಂ ಬ್ರಹ್ಮಜಿಜ್ಞಾಸನಂ, ತಸ್ಮಿನ್ ।



**ಅವತಾರಿಕಾ** — ನಿಮ್ಮ ಈ ಕವಿತೆಯು ನಿಷ್ಫಲ, ಏಕೆಂದರೆ ಕವಿತಾರಚನೆ ಮಾಡುವ ನೀವು ಮಾನವರು, ಮಾನವರಿಗೆ ಭ್ರಮಪ್ರಮಾದ ಮುಂತಾದ ದೋಷಗಳು ಉಂಟಾಗುವುದು ಸ್ವಾಭಾವಿಕ ಆ ದೋಷಗಳಿಂದ ಕೆಟ್ಟಿರುವ ಕವಿತೆಯಿಂದ ಏನು ಉಪಯೋಗ ? ನಿರ್ಮಲವಾದ ಕವಿತೆಯೇ ಸಫಲವಲ್ಲವೇ ? ನಿಮ್ಮ ಕವಿತೆಯು ನಿರ್ಮಲ-ವಲ್ಲದ್ದರಿಂದ ಉಪಯೋಗವಿಲ್ಲ ಎಂದು ಶಂಕಿಸಿದರೆ ಹೇಳುತ್ತಾರೆ ಹಾಗಲ್ಲ ನನ್ನ ಈ ಕವಿತೆಯು ಗುರುಪಾದ (ಶ್ರೀರಾಘವೇಂದ್ರ)ರ ಚರಣಗಳ ಸಂಬಂಧವುಳ್ಳದ್ದು, ಆ ಗುರುಚರಣರ, ಚರಣಧೂಳಿಯ ಸಂಪರ್ಕದಿಂದ ನಿರ್ಮಲವಾಗಿಯೇ ಆಗುತ್ತದೆ ಎಂದು ದೃಷ್ಟಾಂತಪೂರ್ವಕವಾಗಿ ಹೇಳುತ್ತಿದ್ದಾರೆ —

**ಗುರುಪಾದರಜಸ್ಸಂಗಾದ್ ವಿಮಲಂ ಕವನಂ ಮಮ ।**
**ಕಲುಷಂ ವಾರಿ ಕತಕರಜಸಾ ಕಿಂ ನ ನಿರ್ಮಲಮ್ ॥ 20 ॥**

**ಪದಚ್ಛೇದ** — ಗುರುಪಾದರಜಸ್ಸಂಗಾತ್, ವಿಮಲಂ, ಕವನಂ, ಮಮ, ಕಲುಷಂ, ವಾರಿ, ಕತಕರಜಸಾ, ಕಿಂ, ನ, ನಿರ್ಮಲಮ್ ॥

**ಅನ್ವಯ** — ಗುರುಪಾದರಜಸ್ಸಂಗಾತ್ ಮಮ ಕವನಂ ವಿಮಲಂ (ಭವತಿ) । ಕಲುಷಂ ವಾರಿ ಕತಕರಜಸಾ ನಿರ್ಮಲಂ ನ (ಭವತಿ) ಕಿಂ ?

**ಅನ್ವಯಾರ್ಥ** —

**ಗುರುಪಾದರಜಸ್ಸಂಗಾತ್ — ಗುರುಪಾದ** = ಪೂಜ್ಯ ರಾಘವೇಂದ್ರ ಗುರುಸಾರ್ವಭೌಮರ ಚರಣ- ಗಳ, **ರಜಸ್ಸಂಗಾತ್** = ಧೂಳಿಯ ಸಂಬಂಧದಿಂದ

**ಮಮ** = ನನ್ನ

**ಕವನಂ** = ಕವಿತೆಯು

**ವಿಮಲಂ** = ನಿರ್ಮಲವಾಗಿ (ಆಗುತ್ತದೆ)

**ಕಲುಷಂ** = ಕೊಳೆಯಾದ

**ವಾರಿ** = ನೀರು.

**ಕತಕರಜಸಾ** = ಚಿಲ್ಲದ ಬೀಜದ ಪುಡಿಯಿಂದ

**ನಿರ್ಮಲಂ** = ಸ್ವಚ್ಛವಾಗಿ

**ನ (ಭವತಿ) ಕಿಂ ?** = ಆಗುವುದಿಲ್ಲವೇನು ?

**ತಾತ್ಪರ್ಯ** — ಕೆರೆ, ಭಾವಿಗಳ ನೀರು ಬಗ್ಗಡವಾಗಿದ್ದರೆ, ಅದನ್ನು ಶುದ್ಧೀಕರಿಸಲು ಚಿಲ್ಲದ ಬೀಜದ ಪುಡಿಯನ್ನು ಹಾಕುತ್ತಾರೆ. ಅದರಿಂದ ನೀರು ಸ್ವಚ್ಛವಾಗುತ್ತದೆ. ಅದರಂತೆ ನನ್ನ ಕವಿತೆಯೇ ಮಾನವರಲ್ಲಿರುವ ದೋಷಗಳಿಂದ ಕೆಟ್ಟಿರಬಹುದಾದರೂ ನಮ್ಮ ಪರಮ ಪೂಜ್ಯ ಶ್ರೀರಾಘವೇಂದ್ರ ಗುರುಸಾರ್ವಭೌಮರ ಪಾದ ಪದ್ಮಗಳ ಧೂಳಿಯು ಈ ಕವಿತೆಯನ್ನು ಸೋಕಿರುವುದರಿಂದ ಈ ಕವಿತೆಯು ಶುದ್ಧವಾಗಿ ಸ್ವೀಕರಿಸಲು ಯೋಗ್ಯ- ವಾಗುತ್ತದೆ ಎಂದು ಭಾವ.

ವಿಗ್ರಹ —

**ಗುರುಪಾದರಜಸ್ಸಂಗಾತ್** — ಗುರೂಣಾಂ ಪಾದೌ ಗುರುಪಾದೌ, ಗುರುಪಾದಯೋಃ ರಜಾಂಸಿ ಗುರುಪಾದರಜಾಂಸಿ, ಗುರುಪಾದರಜಸಾಂ ಸಂಗಃ ಗುರುಪಾದರಜಸ್ಸಂಗಃ, ತಸ್ಮಾತ್ ।

**ಕತಕರಜಸಾ** — ಕತಕಸ್ಯ ರಜಃ ಕತಕರಜಃ, ತೇನ ।

**ಅಲಂಕಾರ** — ಇಲ್ಲಿಯೂ ದೃಷ್ಟಾಂತಾಲಂಕಾರವಿದೆ.



**ಅವತಾರಿಕಾ** — ಕವಿತೆಯು ನಿರ್ಮಲವಾಗಿರಬೇಕೆಂದು ಹೇಳಿದ್ದಾಯಿತು ಅಯೋಗ್ಯರನ್ನು ಕುರಿತು ಬರೆದ ಕವಿತೆಯೂ ನಿರ್ಮಲವಾಗಿರಬಹುದು. ಆದ್ದರಿಂದ ಅದು ರಮಣೀಯವೆಂದು ಎಲ್ಲರೂ ಅದನ್ನು ಸ್ವೀಕರಿಸ- ಬೇಕಾದೀತು ಎಂಬ ಸಂದೇಹಕ್ಕೆ ಇಲ್ಲಿ ಉತ್ತರ ಹೇಳುತ್ತಿದ್ದಾರೆ. 'ನಾಯಕೋ ಯದಿ ವರ್ಣ್ಯೇತ ಲೋಕೋತ್ತರ- ಗುಣೋತ್ತರಃ' ಕಾವ್ಯವು ಸಾಧಾರಣವಾಗಿದ್ದು ದೋಷಗಳಿಂದ ಕೂಡಿದ್ದರೂ ಅಲೌಕಿಕವಾದ ಉತ್ತಮ ಗುಣಗಳಿಂದ ಕೂಡಿದ ನಾಯಕನನ್ನು ಆ ಕಾವ್ಯದಲ್ಲಿ ವರ್ಣಿಸಿದರೆ ಅದು ಎಲ್ಲರಿಗೂ ಸ್ವೀಕರಿಸಲು ಯೋಗ್ಯವಾಗುತ್ತದೆ ಎಂಬ ನ್ಯಾಯದಿಂದ ನಮ್ಮ ಗುರುಗಳು, ಲೋಕವನ್ನೆಲ್ಲಾ ಮೀರಿರುವ ಗುರುಶಿರೋಮಣಿಗಳಾದ್ದರಿಂದ, ಅವರನ್ನು ಕುರಿತು

ಬರೆದ ಈ ಕಾವ್ಯವು ಎಲ್ಲಾ ಸಜ್ಜನರೂ ಸ್ವೀಕರಿಸಲು ಯೋಗ್ಯವಾಗಿಯೇ ಆಗುತ್ತದೆ ಎಂಬ ಅಭಿಪ್ರಾಯವನ್ನಿಟ್ಟು-ಕೊಂಡು, ದುರ್ಜನನಾದ ನಾಯಕನನ್ನು ಅಧಿಕರಿಸಿ ಬರೆದಿರುವ ಕಾವ್ಯವೇ ತ್ಯಾಜ್ಯವಾಗುತ್ತದೆಯೆಂದು ಉಪ-ಮೆಯನ್ನು ಕೊಟ್ಟು ತಿಳಿಸುತ್ತಾರೆ —

**ರಮಣೀಯಾಽಪಿ ಕವಿತಾ ನ ಹೃದ್ಯಾ ಯದ್ಯಸತ್ಪರಾ ।**
**ನಿಸರ್ಗಮಧುರಾ ದುಷ್ಟಜಿಹ್ವಾಸಕ್ತೇವ ಶರ್ಕರಾ ॥ 21 ॥**

**ಪದಚ್ಛೇದ** — ರಮಣೀಯಾ, ಅಪಿ, ಕವಿತಾ, ನ ಹೃದ್ಯಾ, ಯದಿ, ಅಸತ್ಪರಾ, ನಿಸರ್ಗಮಧುರಾ, ದುಷ್ಟ-ಜಿಹ್ವಾಸಕ್ತಾ, ಇವ, ಶರ್ಕರಾ ।

**ಅನ್ವಯ** — ನಿಸರ್ಗಮಧುರಾ (ಅಪಿ) ದುಷ್ಟಜಿಹ್ವಾಸಕ್ತಾ, ಶರ್ಕರಾ ಇವ, ರಮಣೀಯಾ ಅಪಿ ಕವಿತಾ, ಯದಿ ಅಸತ್ಪರಾ (ತರ್ಹಿ) ಹೃದ್ಯಾ ನ (ಭವತಿ) ।

**ಅನ್ವಯಾರ್ಥ** —

**ನಿಸರ್ಗಮಧುರಾ — ನಿಸರ್ಗ** = ಸ್ವಭಾವದಿಂದ, **ಮಧುರಾ (ಅಪಿ)** = ಸಿಹಿಯಾಗಿದ್ದರೆ

**ದುಷ್ಟಜಿಹ್ವಾಸಕ್ತಾ — ದುಷ್ಟ** = ಪಿತ್ತಾದಿ ರೋಗದಿಂದ ಕೆಟ್ಟುಹೋಗಿರುವ, **ಜಿಹ್ವಾ** = ನಾಲಿಗೆಯಲ್ಲಿ, **ಸಕ್ತಾ** = ಸಂಬಂಧವನ್ನು ಹೊಂದಿರುವ

**ಶರ್ಕರಾ ಇವ** = ಸಕ್ಕರೆಯಂತೆ

**ರಮಣೀಯಾ ಅಪಿ** = ಮನೋಹರವಾಗಿದ್ದರೂ

**ಕವಿತಾ** = ಕವಿತೆಯು

**ಯದಿ** = ಒಂದು ವೇಳೆ

**ಅಸತ್ಪರಾ (ತರ್ಹಿ)** = ದುರ್ಜನನಾದ ನಾಯಕನನ್ನು ಹೊಗಳುತ್ತಿದ್ದರೆ

**ಹೃದ್ಯಾ ನ (ಭವತಿ)** = ಮನೋಹರವಾಗಿರುವುದಿಲ್ಲ

**ತಾತ್ಪರ್ಯ** — ಸಕ್ಕರೆಯು ಸ್ವಭಾವತಃ ಸಿಹಿ. ಆದರೆ ಪಿತ್ತಾದಿ ರೋಗದಿಂದ ನಾಲಿಗೆಯು ಕೆಟ್ಟಿರುವಾಗ ಸಕ್ಕರೆಯ ರುಚಿಯು ಗೊತ್ತಾಗುವುದಿಲ್ಲ, ಅದು ಕಹಿಯಾಗಿ ತೋರುತ್ತದೆ. ಅದರಂತೆ ಕವಿತೆಯು ಶಬ್ದಾರ್ಥಾ-ಲಂಕಾರಗಳಿಂದ ಕೂಡಿದ್ದು ,ವ್ಯಾಕರಣ ಸಂಸ್ಕಾರಭರಿತವಾಗಿದ್ದು , ಶೃಂಗಾರಾದಿ ರಸಪೂರಿತವಾಗಿದ್ದರೂ ಕೂಡ, ಗುಣಲೇಶವಿಲ್ಲದ ದುರ್ಜನನಾದ ನಾಯಕನನ್ನು ಹೊಗಳಲು ಬರೆಯಲ್ಪಟ್ಟಿದ್ದರೆ, ಅಂತಹ ಕವಿತೆಯು ಎಂದೂ ಯಾರಿಗೂ ಮನೋಹರವಾಗಿರುವುದಿಲ್ಲ. ಪ್ರಕೃತ ನನ್ನ ಕವಿತೆಯು ಅಂತಹುದಲ್ಲ.

**ಅಲಂಕಾರ** — ಇಲ್ಲಿ ಉಪಮಾಲಂಕಾರವಿದೆ.

**ವಿಗ್ರಹ** —

**ಅಸತ್ಪರಾ** — ಸತಿಪರಾ ಸತ್ಪರಾ ನ ಸತ್ಪರಾ ಅಸತ್ಪರಾ ।

**ನಿಸರ್ಗಮಧುರಾ** — ನಿಸರ್ಗೇಣ ಮಧುರಾ ನಿಸರ್ಗಮಧುರಾ ।

**ದುಷ್ಟಜಿಹ್ವಾಸಕ್ತಾ** — ದುಷ್ಟಾ ಚ ಸಾ ಜಿಹ್ವಾ ಚ = ದುಷ್ಟಜಿಹ್ವಾ, ದುಷ್ಟಜಿಹ್ವಾಯಾಂ ಸಕ್ತಾ ದುಷ್ಟ-ಜಿಹ್ವಾಸಕ್ತಾ ।

**ಅವತಾರಿಕಾ** — ಹಿಂದೆ ಗುರುಪಾದರ ಪಾದರಜಸ್ಸಂಬಂಧದಿಂದ ನನ್ನ ಕಾವ್ಯವು ನಿರ್ಮಲ ಎಂದಿಷ್ಟೇ ಹೇಳಿದ್ದಾರೆ. ಆದ್ದರಿಂದ ನನ್ನ ಕಾವ್ಯವು ಸ್ವೀಕರಿಸಲು ಯೋಗ್ಯವೆಂದು ಸ್ಪಷ್ಟವಾಗಿ ಹೇಳಿಲ್ಲ . ಈಗ ಈ ನನ್ನ ಕಾವ್ಯವು ಸ್ವೀಕರಿಸಲು ಯೋಗ್ಯವೆಂದು ಸ್ಪಷ್ಟವಾಗಿ ಹೇಳುತ್ತಾ, ವಿಷಯವನ್ನು ತೋರಿಸುತ್ತಾ, ನನ್ನ ಕಾವ್ಯವು ಉತ್ತಮವಲ್ಲದೆ ಇದ್ದರೂ ಸ್ವೀಕಾರಾರ್ಹವೆಂಬ ವಿಷಯದಲ್ಲಿ ದೃಷ್ಟಾಂತವನ್ನು ತೋರಿಸುತ್ತಾ ತನ್ನ ಕಾವ್ಯ ಸ್ವರೂಪವನ್ನು ಕವಿಗಳು ನಮ್ಮ ಕಣ್ಣ ಮುಂದೆ ಇಡುತ್ತಿದ್ದಾರೆ.

**ಅಭವ್ಯಮಪಿ ಮೇ ಕಾವ್ಯಂ ಸೇವ್ಯಂ ಗುರುಗುಣಾಶ್ರಯಮ್ ।**
**ಘನಾಘನಗತಂ ವಾರಿ ಯಥಾ ಲವಣವಾರಿಧೇಃ ॥ 22 ॥**

**ಪದಚ್ಛೇದ** — ಅಭವ್ಯಂ, ಅಪಿ, ಮೇ, ಕಾವ್ಯಂ, ಸೇವ್ಯಂ, ಗುರುಗುಣಾಶ್ರಯಂ, ಘನಾಘನಗತಂ, ವಾರಿ, ಯಥಾ, ಲವಣವಾರಿಧೇಃ ।

**ಅನ್ವಯ** — ಯಥಾ ಘನಾಘನಗತಂ ಲವಣವಾರಿಧೇಃ ವಾರಿ ಸೇವ್ಯಂ (ತಥಾ) ಅಭವ್ಯಮಪಿ ಗುರು-ಗುಣಾಶ್ರಯಂ ಮೇ ಕಾವ್ಯಂ ಸೇವ್ಯಮ್ ।

**ಅನ್ವಯಾರ್ಥ** —

**ಯಥಾ** = ಹೇಗೆ,
**ಘನಾಘನಗತಂ** = ಮಳೆ ಸುರಿಸುವ ಮೋಡದಿಂದ ಬೀಳುತ್ತಿರುವ
**ಲವಣವಾರಿಧೇಃ** = ಉಪ್ಪುನೀರಿನ ಸಮುದ್ರದ
**ವಾರಿ** = ನೀರು
**ಸೇವ್ಯಂ** = ಸೇವಿಸಲು ಯೋಗ್ಯವಾಗಿದೆಯೋ
(**ತಥಾ** = ಹಾಗೆಯೇ)
**ಅಭವ್ಯಂ ಅಪಿ** = ಗುಣರಸಾಲಂಕಾರಾದಿ ಹೀನವಾಗಿದ್ದರೂ
**ಗುರುಗುಣಾಶ್ರಯಂ** = ಶ್ರೀರಾಘವೇಂದ್ರ ಗುರುಸಾರ್ವಭೌಮರ ಗುಣಗಳನ್ನು ಒಳಗೊಂಡಿರುವ
**ಮೇ** = ನನ್ನ
**ಕಾವ್ಯಂ** = ಕಾವ್ಯವು
**ಸೇವ್ಯಂ** = ಸ್ವೀಕರಿಸಲು ಯೋಗ್ಯವು.

**ತಾತ್ಪರ್ಯ** — ಸಮುದ್ರದ ನೀರು ಉಪ್ಪು. ಆದರೆ ಆ ನೀರು ಮೋಡವನ್ನು ಸೇರಿ, ಅದರ ಮೂಲಕ ಮಳೆ ನೀರಾಗಿ ಕೆಳಗೆ ಸುರಿಯುವಾಗ ಉಪ್ಪಾಗಿರುವುದಿಲ್ಲ. ಸಿಹಿಯಾಗಿರುತ್ತದೆ ಅದರಂತೆಯೇ ನನ್ನ ಕಾವ್ಯವು ಗುಣಾ-ಲಂಕಾರ ರಸಗಳಿಂದ ಹೀನವಾಗಿರಬಹುದು, ನಿಪುಣತೆಯಿಂದ ಕೂಡಿಲ್ಲದಿರಬಹುದು. ಆದರೂ ಗುರುಗಳ ಗುಣಗಳನ್ನು ವರ್ಣಿಸಲು ಹೊರಟಿರುವುದರಿಂದ ಸಜ್ಜನರಿಗೆ ಈ ಕಾವ್ಯವು ಸೇವಿಸಲು ಯೋಗ್ಯವಾಗಿಯೇ ಆಗುತ್ತದೆ ಎಂದು ತನ್ನ ಕಾವ್ಯವು ಸ್ವೀಕಾರಕ್ಕೆ ಯೋಗ್ಯವೆಂದು ಕವಿಗಳು ತಿಳಿಸುತ್ತಿದ್ದಾರೆ.

**ವಿಗ್ರಹ** —

**ಅಭವ್ಯಂ** — ನ ಭವ್ಯಂ ಅಭವ್ಯಮ್ ।

**ಸೇವ್ಯಂ** — ಸೇವಿತುಂ ಯೋಗ್ಯಂ ಸೇವ್ಯಮ್ ।

**ಗುರುಗುಣಾಶ್ರಯಂ** — ಗುರೂಣಾಂ ಗುಣಾಃ ಗುರುಗುಣಾಃ ಗುರುಗುಣಾನಾಂ ಆಶ್ರಯಂ ಯಸ್ಮಿನ್ ತತ್ ಗುರುಗುಣಾಶ್ರಯಮ್ (ಗುರುಗುಣಾನ್ ಆಶ್ರಯತೀತಿ ಗುರುಗುಣಾ-ಶ್ರಯಮ್) ।

**ಘನಾಗತಂ** — ಘನಾಘನೇ ಗತಂ ಘನಾಘನಗತಮ್ ।

**ಲವಣವಾರಿಧೇಃ** — ಲವಣಾನಿ ಚ ತಾನಿ ವಾರೀಣಿ ಚ ಲವಣವಾರೀಣಿ, ಲವಣವಾರೀಣೀ ಧೀಯಂತೇ ಅಸ್ಮಿನ್ ಇತಿ ಲವಣವಾರಿಧಿಃ, ತಸ್ಯ ।

**ಅಲಂಕಾರ** — ಇಲ್ಲಿ ಉಪಮಾಲಂಕಾರವಿದೆ.



**ಅವತಾರಿಕಾ** — ಈಗ ಕವಿಗಳು ನನ್ನ ಕಾವ್ಯವನ್ನು ನೀವೆಲ್ಲರೂ ಸ್ವೀಕರಿಸಬೇಕೆಂದು ಪಂಡಿತರನ್ನು ವಿನಯದಿಂದ ಪ್ರಾರ್ಥಿಸುತ್ತಾರೆ —

**ಅದೋಷಾಪ್ಯಗುಣೇತ್ಯುಕ್ತಿಸ್ತ್ಯಕ್ತುಂ ಯುಕ್ತಾ ನ ಮೇ ಬುಧೈಃ ।**
**ಪತಿವ್ರತಾಽಗುಣೇತ್ಯೇವ ಪತ್ಯಾ ಕಿಂ ತ್ಯಜ್ಯತೇ ಪ್ರಿಯಾ ॥ 23 ॥**

**ಪದಚ್ಛೇದ** — ಅದೋಷಾ, ಅಪಿ, ಅಗುಣಾ, ಇತಿ, ಉಕ್ತಿಃ, ತ್ಯಕ್ತುಂ, ಯುಕ್ತಾ, ನ, ಮೇ, ಬುಧೈಃ, ಪತಿವ್ರತಾ, ಅಗುಣಾ, ಇತಿ, ಏವ, ಪತ್ಯಾ, ಕಿಂ, ತ್ಯಜ್ಯತೇ, ಪ್ರಿಯಾ ।

**ಅನ್ವಯ** — ಅದೋಷಾ ಅಪಿ ಮೇ ಉಕ್ತಿಃ, ಅಗುಣೇತಿ ಬುಧೈಃ ತ್ಯಕ್ತುಂ ನ ಯುಕ್ತಾ । ಪತಿವ್ರತಾ ಏವ ಪ್ರಿಯಾ ಅಗುಣಾ ಇತಿ ಪತ್ಯಾ ತ್ಯಜ್ಯತೇ ಕಿಮ್ ?

**ಅನ್ವಯಾರ್ಥ** —

**ಅದೋಷಾ ಅಪಿ** = ದೋಷವಿಲ್ಲದಿದ್ದರೂ,
**ಮೇ** = ನನ್ನ
**ಉಕ್ತಿಃ** = ಕಾವ್ಯ ರೂಪವಾದ ಮಾತು,
**ಅಗುಣೇತಿ** = ಗುಣಾಲಂಕಾರಾದಿ ಹೀನವೆಂದು
**ಬುಧೈಃ** = ಪಂಡಿತರಿಂದ
**ತ್ಯಕ್ತುಂ** = ಬಿಡುವುದಕ್ಕೆ
**ನ ಯುಕ್ತಾ** = ಯೋಗ್ಯವಲ್ಲ.
**ಪತಿವ್ರತಾ ಏವ** = ಪಾತಿವ್ರತ್ಯವೆಂಬ ಧರ್ಮವುಳ್ಳವಳಾದುದರಿಂದಲೇ
**ಪ್ರಿಯಾ** = ಪ್ರೀತಿಪಾತ್ರಳಾದ ಪತ್ನಿಯು
**ಅಗುಣಾ ಇತಿ** = ಚುರುಕುತನ ಮುಂತಾದ ಗುಣಗಳು ಇಲ್ಲದವಳೆಂದು
**ಪತ್ಯಾ** = ಗಂಡನಿಂದ
**ತ್ಯಜ್ಯತೇ ಕಿಮ್ ?** = ಬಿಡಲ್ಪಡುತ್ತಾಳೇನು ? (ಎಂದಿಗೂ ಬಿಡಲ್ಪಡುವುದಿಲ್ಲ.)

**ತಾತ್ಪರ್ಯ —** ಲೋಕದಲ್ಲಿ ಒಬ್ಬನಿಗೆ ಪತಿವ್ರತೆಯಾದ ಪತ್ನಿ ಇದ್ದಾಳೆ. ಪಾತಿವ್ರತ್ಯವೆಂದರೆ ಗಂಡನ ಹೊರತು ಇತರ ಪುರುಷರ ಸಂಬಂಧವಿಲ್ಲದಿರುವಿಕೆ. ಇಂತಹ ದೋಷವಿಲ್ಲದಿರುವುದರಿಂದ ಪ್ರೀತಿಪಾತ್ರಳಾದ ಪತ್ನಿಯಲ್ಲಿ , ಚುರುಕುತನ, ವಿಲಾಸಗಳು ಸೌಂದರ್ಯ ಲಾವಣ್ಯಗಳು ನ್ಯೂನವಾಗಿದ್ದರೂ ಪತಿಯು ಅವಳನ್ನು ಎಂದೂ ಬಿಡು-ವುದಿಲ್ಲ. ಅದರಂತೆ ನನ್ನ ಕಾವ್ಯವನ್ನು ಸಹೃದಯರು ಬಿಡಬಾರದು. ಏಕೆಂದರೆ ಲೋಕದಲ್ಲಿ ದೋಷವಿಲ್ಲದಿರುವ ಗುಣಭರಿತವಾದ ಕಾವ್ಯವು ಸೇವಿಸಲು ಯೋಗ್ಯವಾದುದು. ನನ್ನ ಕಾವ್ಯವು ಗುರುಪಾದ ಧೂಳಿಯ ಸಂಪರ್ಕ-ದಿಂದಲೂ, ಗುರುಗಳ ಗುಣಗಳನ್ನು ವರ್ಣಿಸುವುದರಿಂದಲೂ ದೋಷವಿಲ್ಲದ್ದು. ಕಾವ್ಯಗುಣ ರಸಾಲಂಕಾರ ಹೀನವಾದ್ದರಿಂದ ಗುಣಹೀನವೂ ಆಗಿದೆ. ಆದರೂ ಪಂಡಿತರು ದಯೆಯಿಂದ ದೋಷವಿಲ್ಲವೆಂಬ ಕಾರಣ ಮಾತ್ರದಿಂದ ಗುಣಹೀನವಾಗಿದ್ದರೂ ನನ್ನ ಕಾವ್ಯವನ್ನು ಸ್ವೀಕರಿಸಬೇಕು. ಎಂದಿಗೂ ಇದನ್ನು ಬಿಡಬಾರದು.

**ವಿಗ್ರಹ —**

**ಅದೋಷಾ —** ನ ವಿದ್ಯಂತೇ ದೋಷಾಃ ಯಸ್ಯಾಂ ಸಾ ಅದೋಷಾ ।

**ಅಗುಣಾ —** ನ ವಿದ್ಯಂತೇ, ಗುಣಾಃ ಯಸ್ಯಾಂ ಸಾ ಅಗುಣಾ ।

**ಪತಿವ್ರತಾ —** ಪತ್ಯೌ ವ್ರತಂ ಯಸ್ಯಾಃ ಸಾ ಪತಿವ್ರತಾ ।

**ಕ್ರಿಯಾಪದ —**

ತ್ಯಜ ಹಾನೌ ಇತಿ ಹಾನ್ಯರ್ಥಕಾತ್ ತ್ಯಜಧಾತೋಃ ಸಕರ್ಮಕಾತ್ ಕರ್ಮಣಿ ಆತ್ಮನೇಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ ತ್ಯಜ್ಯತೇ ಇತಿ ರೂಪಮ್ ।

| | | |
|---|---|---|
| ತ್ಯಜ್ಯತೇ, | ತ್ಯಜ್ಯೇತೇ, | ತ್ಯಜ್ಯಂತೇ । |
| ತ್ಯಜ್ಯಸೇ, | ತ್ಯಜ್ಯೇಥೇ, | ತ್ಯಜ್ಯಧ್ವೇ। |
| ತ್ಯಜ್ಯೇ, | ತ್ಯಜ್ಯಾವಹೇ, | ತ್ಯಜ್ಯಾಮಹೇ । |

**ಪ್ರಯೋಗ—** ಪತ್ಯಾ ಪತಿವ್ರತಾ ಪ್ರಿಯಾ ತ್ಯಜ್ಯತೇ ಕಿಮ್ ? (ಕರ್ಮಣಿ).
ಪತಿಃ ಪತಿವ್ರತಾಂ ಪ್ರಿಯಾಂ ತ್ಯಜತಿ ಕಿಮ್ ? (ಕರ್ತರಿ).

**ಅಲಂಕಾರ —** ಈ ಶ್ಲೋಕದಲ್ಲಿ ದೃಷ್ಟಾಂತಾಲಂಕಾರವಿದೆ.

★ ★ ★

**ಅವತಾರಿಕಾ —** ಇದುವರೆಗೆ ಕವಿಗಳು ಸ್ವಾಹಂಕಾರ ಖಂಡನಪೂರ್ವಕವಾಗಿ ವಿನಯದಿಂದ ಪಂಡಿತರನ್ನು ಪ್ರಾರ್ಥಿಸಿದರು. ಈಗ ವಾಸ್ತವಿಕವಾಗಿ ನನ್ನ ಕಾವ್ಯವು ಅತ್ಯಂತ ಅದ್ಭುತವಾದುದು ಶ್ರೇಷ್ಠವಾದುದು ಎಂದೇ ಹೇಳುತ್ತಿದ್ದಾರೆ —

**ಅದೋಷಂ ಗುಣವದ್ದೃಶ್ಯಂ ಸರ್ವೈಃ ಸರ್ವಾರ್ಥದಾಯಕಮ್ ।**
**ಪರಂಬ್ರಹ್ಮೇವ ಯತ್ಕಾವ್ಯಂ ಶ್ರುತ್ಯುಕ್ತಂ ತತ್ತು ದುರ್ಲಭಮ್ ॥ 24 ॥**

**ಪದಚ್ಛೇದ —**ಅದೋಷಂ, ಗುಣವತ್, ದೃಶ್ಯಂ, ಸರ್ವೈಃ ಸರ್ವಾರ್ಥದಾಯಕಂ, ಪರಂಬ್ರಹ್ಮ , ಇವ, ಯತ್, ಕಾವ್ಯಂ, ಶ್ರುತ್ಯುಕ್ತಂ, ತತ್, ತು, ದುರ್ಲಭಮ್ ।

**ಅನ್ವಯ** —ಅದೋಷಂ, ಗುಣವತ್ ಸರ್ವೈಃ ದೃಶ್ಯಂ, ಸರ್ವಾರ್ಥದಾಯಕಂ, ಶ್ರುತ್ಯುಕ್ತಂ, ಪರಂಬ್ರಹ್ಮ ಇವ, (ಅದೋಷಂ, ಗುಣವತ್, ಸರ್ವೈಃ ದೃಶ್ಯಂ, ಸರ್ವಾರ್ಥದಾಯಕಂ) ಯತ್ ಕಾವ್ಯಂ, ತತ್ ತು ದುರ್ಲಭಮ್ ।

**ಅನ್ವಯಾರ್ಥ** —

**ಅದೋಷಂ** = ಸಮಸ್ತ ದೋಷರಹಿತವಾದ (ಕಾವ್ಯ ದೋಷಗಳಿಲ್ಲದಿರುವ)

**ಗುಣವತ್** = ಸಕಲ ಗುಣಪರಿಪೂರ್ಣವಾದ, (ಎಲ್ಲಾ ಕಾವ್ಯ ಗುಣಗಳಿಂದ ಕೂಡಿದ)

**ಸರ್ವೈಃ** = ಎಲ್ಲಾ ಜ್ಞಾನಿಗಳಿಂದ

**ದೃಶ್ಯಂ** = ಅಪರೋಕ್ಷದಿಂದ ನೋಡಲ್ಪಡುವ, (ಅಸೂಯಾರಹಿತರಾದ ಎಲ್ಲಾ ವಿದ್ವಾಂಸರಿಂದಲೂ ಓದಿ ತಿಳಿಯಲು ಯೋಗ್ಯವಾದ)

**ಸರ್ವಾರ್ಥದಾಯಕಂ** = ಮೋಕ್ಷಾದಿ ಸಕಲಪುರುಷಾರ್ಥದಾಯಕವಾದ (ಕಾವ್ಯವೂ ಇಂತಹುದೇ)

**ಶ್ರುತ್ಯುಕ್ತಂ** = ವೇದ ಪ್ರತಿಪಾದ್ಯವಾದ (ರಸೋ ವೈ ಸಃ ಇತ್ಯಾದಿ ವೇದಸೂಚಿತವಾದ)

**ಪರಂಬ್ರಹ್ಮ ಇವ** = ಪರಬ್ರಹ್ಮನಂತಿರುವ,

**ಯತ್ ಕಾವ್ಯಂ** = ಯಾವ ಕಾವ್ಯವಿದೆಯೋ,

**ತತ್ ತು** = ಅಂತಹ ಕಾವ್ಯವಾದರೋ,

**ದುರ್ಲಭಂ** = ಹೊಂದಲು ಕಷ್ಟವಾದುದು (ಸಿಗಲಾರದು).

**ತಾತ್ಪರ್ಯ** — ಲೋಕದಲ್ಲಿ ಚಿಂತಾ ಸಂತಾಪಾದಿ ಸಮಸ್ತದೋಷ ದೂರವಾಗಿರುವ, ಶುದ್ಧಾನಂದಾದಿ ಅನಂತ ಕಲ್ಯಾಣಗುಣ ಪರಿಪೂರ್ಣವಾದ, ಮೋಕ್ಷಾದಿಚತುರ್ವಿಧಪುರುಷಾರ್ಥಪ್ರದವಾದ, ಅಪರೋಕ್ಷಜ್ಞಾನದ ಮೂಲಕ ಎಲ್ಲಾ ಯೋಗ್ಯ ಮುಮುಕ್ಷುಗಳಿಂದಲೂ ತಿಳಿಯಲು ಯೋಗ್ಯವಾದ, 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯಾದಿ ವೇದಪ್ರತಿಪಾದ್ಯವಾದ ಲಕ್ಷಣಗಳಿಂದ ಕೂಡಿದ ಪರಬ್ರಹ್ಮವು ಅತ್ಯಂತ ದುರ್ಲಭ. ಎಲ್ಲರಿಗೂ ಅದನ್ನು ನೋಡಲು, ಹೊಂದಲು ಸಾಧ್ಯವಿಲ್ಲ. ಅದರಂತೆ ಯಾವ ಕಾವ್ಯ ದೋಷವೂ ಇಲ್ಲದಿರುವ, ರಸಗುಣಾಲಂಕಾ- ರಾದಿಗಳಿಂದ ಪರಿಪೂರ್ಣವೂ, ಅಸೂಯಾರಹಿತವಾದ ಸಹೃದಯ ಪಂಡಿತರಿಂದ ಓದಿ ತಿಳಿಯಲು ಯೋಗ್ಯವೂ ಮೋಕ್ಷಾದಿ ಸಮಸ್ತ ಪುರುಷಾರ್ಥದಾಯಕವೂ ಆದ, (ವೇದದಲ್ಲಿಯೂ ಹೊಗಳಲ್ಪಟ್ಟ) ಉತ್ತಮೋತ್ತಮ ಕಾವ್ಯವು ಅತ್ಯಂತ ದುರ್ಲಭವು ಎಲ್ಲಾ ಕಾವ್ಯದಲ್ಲಿಯೂ ಕೆಲವು ಗುಣಗಳು, ಕೆಲವು ದೋಷಗಳೂ ಇರಬಹುದು. ಆದ್ದರಿಂದ ಕೆಲವು ದೋಷಗಳಿರಬಹುದಾದರೂ ಯಥಾಯೋಗ್ಯವಾಗಿ ಗುಣಗಳಿಂದ ಕೂಡಿರುವ, ನನ್ನ ಕಾವ್ಯವನ್ನು ಎಲ್ಲರೂ ಪರಿ- ಗ್ರಹಿಸಬೇಕು. ವಾಸ್ತವಿಕವಾಗಿ ನನ್ನೀ ಕಾವ್ಯವು ದೋಷರಹಿತವಾಗಿಯೇ ಇದೆ. ಕಾವ್ಯಗಳಿಗೆ ಬೇಕಾಗಿರುವ ಗುಣ- ಗಳಿಂದಲೂ ಕೂಡಿದೆ. ಸರ್ವಪುರುಷಾರ್ಥದಾಯಕವಾಗಿ ಸರ್ವಪಂಡಿತರಿಂದ ಮಾನ್ಯವಾಗಿರುವುದರಿಂದ ಎಲ್ಲರಿಗೂ ದುರ್ಲಭವಾದರೂ ಪರಬ್ರಹ್ಮವು ಭಕ್ತ-ಜ್ಞಾನಿಗಳಿಗೆ ಸಿಗುವಂತೆ, ಸಜ್ಜನರು ಹರಿಗುರುಕೃಪೆಯಿಂದ ರಚಿತವಾಗಿರುವ ಈ ಕಾವ್ಯವನ್ನು ಸ್ವೀಕರಿಸಬೇಕು ಎಂದು ಭಾವ.

**ಅಲಂಕಾರ** — ಕಾವ್ಯವೆಂಬ ಉಪಮೇಯವನ್ನೂ ಪರಬ್ರಹ್ಮವೆಂಬ ಉಪಮಾನವನ್ನೂ, ದುರ್ಲಭತ್ವ, ಸರ್ವಾರ್ಥದಾಯಕತ್ವ, ಅದೋಷತ್ವ, ಗುಣವತ್ತ್ವ, ಶ್ರುತಿಪ್ರತಿಪಾದಿತ್ವ, ಎಲ್ಲರಿಂದಲೂ (ಜ್ಞಾನಿಗಳಿಂದ) ತಿಳಿಯ- ಲ್ಪಡುವಿಕೆ ಎಂಬ ಉಪಮಾನೋಪಮೇಯ ಸಾಧಾರಣ ಧರ್ಮಗಳನ್ನು ಇವ ಎಂಬ ಉಪಮಾವಾಚಕ ಪದವನ್ನೂ ಹೇಳಿರುವುದರಿಂದ ಇಲ್ಲಿ 'ಪೂರ್ಣೋಪಮಾಲಂಕಾರ'ವಿದೆ.

ವಿಗ್ರಹ—

**ಅದೋಷಂ** — ನ ವಿದ್ಯಂತೇ ದೋಷಾಃ ಯಸ್ಮಿನ್ ತತ್ ಅದೋಷಮ್ ।

**ಗುಣವತ್** — ಗುಣಾಃ ಅಸ್ಯ ಸಂತೀತಿ ಗುಣವತ್ ।

**ದೃಶ್ಯಂ** — ದ್ರಷ್ಟುಂ ಶಕ್ಯಂ ದೃಶ್ಯಮ್ ।

**ಸರ್ವಾರ್ಥದಾಯಕಂ** — ಸರ್ವೇ ಚ ತೇ ಅರ್ಥಾಶ್ಚ ಸರ್ವಾರ್ಥಾಃ, ಸರ್ವಾರ್ಥಾನ್ ದದಾತೀತಿ ಸರ್ವಾರ್ಥದಾಯಕಮ್ ।

**ಶ್ರುತ್ಯುಕ್ತಂ** — ಶ್ರುತಿಷು ಉಕ್ತಂ ಶ್ರುತ್ಯುಕ್ತಮ್ ।

**ದುರ್ಲಭಮ್** — ದುಃಖೇನ ಲಬ್ಧುಂ ಶಕ್ಯಂ ದುರ್ಲಭಮ್ ।

★ ★ ★

**ಅವತರಣಿಕಾ**— ಈಗ ಕವಿಗಳು 'ನನ್ನ ಕಾವ್ಯವು ದೋಷರಹಿತವಾಗಿದ್ದರೂ ಸಹ ಯಾವನೋ ಒಬ್ಬ ಮತ್ಸರಿಯು ದೋಷಗಳನ್ನು ಹುಡುಕುತ್ತಾನೆ ಆದರೆ ಅವನಿಗೆ ದೋಷಗಳು ಸಿಗುವುದಿಲ್ಲ, ಅವನ ದೋಷಾನ್ವೇಷಣೆಯು ಅಸೂಯಾ ಸ್ವಭಾವವನ್ನು ಮಾತ್ರ ಪ್ರಕಟಗೊಳಿಸುತ್ತದೆ' ಎಂದು ಈ ಪದ್ಯದಲ್ಲಿ ತಿಳಿಸುತ್ತಿದ್ದಾರೆ.

**ಕಾವ್ಯೇ ಗವೇಷತೇ ಕಶ್ಚಿದ್ದೋಷಮೇವ ಗುಣಂ ಪರಃ ।**
**ಪಿಚುಮಂದಂ ಯಥಾ ಕಾಕಃ ಪಿಕಶ್ಚೂತಲತಾಂ ಯಥಾ ॥ 25 ॥**

**ಪದಚ್ಛೇದ** — ಕಾವ್ಯೇ, ಗವೇಷತೇ, ಕಶ್ಚಿತ್, ದೋಷಂ, ಏವ, ಗುಣಂ, ಪರಃ, ಪಿಚುಮಂದಂ, ಯಥಾ, ಕಾಕಃ, ಪಿಕಃ, ಚೂತಲತಾಂ, ಯಥಾ ।

**ಅನ್ವಯ** — ಯಥಾ ಕಾಕಃ ಪಿಚುಮಂದಂ ಗವೇಷತೇ, ಯಥಾ ಪಿಕಃ ಚೂತಲತಾಂ ಗವೇಷತೇ, ತಥಾ, ಕಶ್ಚಿತ್ ಕಾವ್ಯೇ ದೋಷಮೇವ ಗವೇಷತೇ, ಪರಃ ಗುಣಂ (ಏವ) ಗವೇಷತೇ ।

**ಅನ್ವಯಾರ್ಥ** —

**ಯಥಾ** = ಹೇಗೆ

**ಕಾಕಃ** = ಕಾಗೆಯು

**ಪಿಚುಮಂದಂ** = ಬೇವಿನ ಹಣ್ಣನ್ನು

**ಗವೇಷತೇ** = ಹುಡುಕುತ್ತದೆಯೋ,

**ಯಥಾ** = ಹೇಗೆ

**ಪಿಕಃ** = ಕೋಗಿಲೆಯು

**ಚೂತಲತಾಂ** = ಮಾವಿನ ಬಳ್ಳಿಯನ್ನು (ಬಳ್ಳಿಯಂತಿರುವ ಮಾವಿನ ಚಿಗುರನ್ನು)

**ಗವೇಷತೇ** = ಹುಡುಕುತ್ತದೆಯೋ,

**ತಥಾ** = ಹಾಗೆಯೇ

**ಕಶ್ಚಿತ್** = ಯಾವನೋ ಒಬ್ಬನು

**ಕಾವ್ಯೇ** = ಕಾವ್ಯದಲ್ಲಿ
**ದೋಷಮೇವ** = ದೋಷವನ್ನೇ
**ಗವೇಷತೇ** = ಹುಡುಕುತ್ತಾನೆ.
**ಪರಃ** = ಮತ್ತೊಬ್ಬನು
**ಗುಣಂ ಏವ** = ಗುಣವನ್ನೇ
**ಗವೇಷತೇ** = ಹುಡುಕುತ್ತಾನೆ.

**ತಾತ್ಪರ್ಯ** — ನೀಚವಾದ ಕಾಗೆಯು ತನ್ನ ಸ್ವಭಾವಕ್ಕೆ ಅನುಗುಣವಾಗಿ ಕಹಿಯಾದ ಬೇವಿನ ಚಿಗುರನ್ನೋ ಹಣ್ಣನ್ನೋ ಅರಸುತ್ತಾ ಹೋಗುತ್ತದೆ. ಹಾಗೆಯೇ ಕೆಲವು ಹೆಸರು ಹೇಳಲು ಅಯೋಗ್ಯರಾದ ನೀಚರು ಕಾವ್ಯದಲ್ಲಿ ಯಾವುದಾದರೊಂದು ಕಾವ್ಯದೋಷವನ್ನೇ ಹುಡುಕುತ್ತಾರೆ. ಕೋಗಿಲೆಯು ತನ್ನ ಸ್ವಭಾವಕ್ಕೆ ಅನುಗುಣವಾಗಿ ಒಗರು ಸಿಹಿಯಾದ ಮಾವಿನ ಚಿಗುರನ್ನು ಹುಡುಕಿಕೊಂಡು ಹೋಗುತ್ತದೆ. ಅದನ್ನು ಆಸ್ವಾದಿಸಿ ಸಂತೋಷಪಡುತ್ತದೆ. ಉತ್ತಮನಾದ ಸಹೃದಯನು ಕಾವ್ಯದಲ್ಲಿ ಯಾವುದಾದರೊಂದು ಗುಣವಿದೆಯೋ ಎಂದು ಹುಡುಕಿ, ಅದನ್ನು ಕಂಡು ಆಸ್ವಾದಿಸಿ ಸಂತೋಷಪಡುತ್ತಾನೆ. ದೋಷವನ್ನು ಹುಡುಕುವುದು ದುರ್ಜನನ ಸ್ವಭಾವ, ಗುಣವನ್ನು ಹುಡುಕುವುದು ಸಜ್ಜನನ ಸ್ವಭಾವ. ಆದ್ದರಿಂದ ದುರ್ಜನನು ನನ್ನ ಕಾವ್ಯದಲ್ಲಿ ದೋಷವನ್ನು ಹೇಳಿದ ಮಾತ್ರದಿಂದ ದೋಷರಹಿತವಾದ ನನ್ನ ಕಾವ್ಯಕ್ಕೆ ಯಾವ ಕುಂದೂ ಉಂಟಾಗಲಾರದು.

**ಅಲಂಕಾರ** — ಇಲ್ಲಿ ಬಿಂಬ-ಪ್ರತಿಬಿಂಬ ಭಾವವನ್ನು ಹೊಂದಿದ ಸಾಧಾರಣ ಧರ್ಮದಿಂದ ಕೂಡಿದ ಉಪಮಾಲಂಕಾರವಿದೆ. ಕಶ್ಚಿತ್ ಎಂಬುದು ಉಪಮೇಯ, ಕಾಕ ಉಪಮಾನ — ಯಥಾ ಉಪಮಾವಾಚಕ ಶಬ್ದ, ಪಿಚುಮಂದಗವೇಷಣ, ದೋಷಗವೇಷಣಗಳು ಸಾಧಾರಣ ಧರ್ಮ, ಪರನು ಉಪಮೇಯ, ಪಿಕ ಉಪಮಾನ, ಯಥಾ ಉಪಮಾವಾಚಕ ಶಬ್ದ , ಚೂತಲತಾಗವೇಷಣ ಮತ್ತು ಗುಣಗವೇಷಣಗಳು ಸಾಧಾರಣ ಧರ್ಮ ಪಿಚುಮಂದಗವೇಷಣ (ಬೇವಿನ ಗಿಡದ ಅನ್ವೇಷಣ) ದೋಷಗವೇಷಣಗಳಿಗೆ ಬಿಂಬ ಪ್ರತಿಬಿಂಬ ಭಾವವಿದ್ದು , ಆ ಧರ್ಮಗಳಿಂದ ಕೂಡಿದ ಕಾಗೆಗೂ ನೀಚನಿಗೂ ಬಿಂಬ-ಪ್ರತಿಬಿಂಬ ಭಾವದಿಂದ ಕೂಡಿದ ಧರ್ಮದಿಂದ ಉಪಮೇಯ-ಉಪಮಾನ ಭಾವವಿದೆ. ಚೂತಲತಾಗವೇಷಣ (ಮಾವಿನ ಚಿಗುರಿನ ಅನ್ವೇಷಣ) ಗುಣಗವೇಷಣಗಳಿಗೆ ಬಿಂಬ-ಪ್ರತಿಬಿಂಬ ಭಾವವಿದೆ. ಬಿಂಬ-ಪ್ರತಿಬಿಂಬ ಭಾವಾಪನ್ನವಾದ ಅವೆರಡು ಧರ್ಮಗಳಿಂದ ಕೂಡಿದ ಸಜ್ಜನ (ಪರ) ಮತ್ತು ಕೋಗಿಲೆಗಳಿಗೆ ಉಪಮೇಯ-ಉಪಮಾನ ಭಾವವಿದೆ. ಹೀಗೆ ಇಲ್ಲಿ ಉಪಮಾಲಂಕಾರವಿದೆಯೆಂದು ಭಾವಿಸಬೇಕು.

**ವಿಗ್ರಹ** —

**ಚೂತಲತಾ** — ಚೂತಃ ಇತಿ ಲತಾ ಚೂತಲತಾ, ಚೂತಸ್ಯ ಲತಾ ಚೂತಲತಾ ।

**ಕ್ರಿಯಾಪದ** — ಗವೇಷ ಮಾರ್ಗಣೇ ಇತಿ ಮಾರ್ಗಣಾರ್ಥಕಾತ್ ಗವೇಷಧಾತೋಃ ಸಕರ್ಮಕಾತ್ ಕರ್ತರಿ ಲಟ್. ಇದು ಚುರಾದಿ ಣಿಜಂತ ಧಾತು. ಣಿಚ್ ಪ್ರತ್ಯಯವನ್ನು ಹೇಳದೆ ಇದ್ದಾಗ 'ಗವೇಷತೇ' ಎಂದು ರೂಪ. (ಣಿಚ್ ಹೇಳಿದರೆ ಗವೇಷಯತೇ ಎಂದು ರೂಪ.)

| | | |
|---|---|---|
| ಗವೇಷತೇ, | ಗವೇಷೇತೇ, | ಗವೇಷಂತೇ । |
| ಗವೇಷಸೇ, | ಗವೇಷೇಥೇ, | ಗವೇಷಧ್ವೇ । |
| ಗವೇಷೇ, | ಗವೇಷಾವಹೇ, | ಗವೇಷಾಮಹೇ । |

**ಪ್ರಯೋಗ**— ಕಶ್ಚಿತ್ ಕಾವ್ಯೇ ದೋಷಂ ಗವೇಷತೇ । (ಕರ್ತರಿ).
ಕೇನಚಿತ್ ಕಾವ್ಯೇ ದೋಷಃ ಗವೇಷ್ಯತೇ । (ಕರ್ಮಣಿ).



**ಅವತಾರಿಕಾ** — ಕವಿಗಳು ಹೀಗೆ ಪ್ರಾರಂಭಿಸಿದ ಪೀಠಿಕಾ ರಚನೆಯನ್ನು ಮುಗಿಸಿದರು. ಇನ್ನು ಮುಂದೆ ಗುರುಗಳ ಗುಣವನ್ನು ಸ್ತೋತ್ರ ಮಾಡಲು ಪ್ರಾರಂಭಿಸುತ್ತಾರೆ. ಆದರೆ ಅದಕ್ಕಿಂತಲೂ ಮೊದಲು ಹೀಗೆ ಹೇಳುತ್ತಾರೆ. 'ನಮ್ಮ ಗುರುವರ್ಯರ ಗುಣವನ್ನು ಹೊಗಳಲು ನನಗೆ ಸಾಧ್ಯವಿಲ್ಲ, ಗುರುಗಳ ಗುಣಗಳು ಬಹಳ ಇವೆ .ನನ್ನ ಬುದ್ಧಿ ಅತ್ಯಲ್ಪ, ಆದರೂ ನನ್ನ ಬುದ್ಧಿಗನುಸಾರವಾಗಿ ಕೆಲವು ಗುಣಗಳನ್ನು ಮಾತ್ರ ಸ್ವೀಕರಿಸಿ ಭಕ್ತಿಯಿಂದ ಅವರ ಅನುಗ್ರಹ ಬಲದಿಂದ ಸ್ತೋತ್ರ ಮಾಡುತ್ತೇನೆ' ಎಂದು ಹೇಳುತ್ತಾರೆ.

**ಅಸ್ಮದ್ಗುರೂಣಾಮಾಧಿಕ್ಯಂ ಕವಿಃ ಕೋ ವಾಽನುವರ್ಣಯೇತ್ ।**
**ತಥಾಪಿ ತತ್ಪ್ರಸಾದೇನ ಭಕ್ತ್ಯಾ ಕಿಂಚಿದ್ವದಾಮ್ಯಹಮ್ ॥ 26 ॥**

**ಪದಚ್ಛೇದ** — ಅಸ್ಮದ್ಗುರೂಣಾಂ, ಆಧಿಕ್ಯಂ, ಕವಿಃ, ಕಃ, ವಾ, ಅನುವರ್ಣಯೇತ್, ತಥಾ, ಅಪಿ, ತತ್ಪ್ರಸಾದೇನ, ಭಕ್ತ್ಯಾ, ಕಿಂಚಿತ್, ವದಾಮಿ, ಅಹಮ್ ।

**ಅನ್ವಯ** — ಅಸ್ಮದ್ಗುರೂಣಾಂ ಆಧಿಕ್ಯಂ ಕಃ ವಾ ಕವಿಃ ಅನುವರ್ಣಯೇತ್, ತಥಾಪಿ ತತ್ಪ್ರಸಾದೇನ ಅಹಂ ಭಕ್ತ್ಯಾಕಿಂಚಿತ್ ವದಾಮಿ ।

**ಅನ್ವಯಾರ್ಥ** —

**ಅಸ್ಮದ್ಗುರೂಣಾಂ** — **ಅಸ್ಮತ್** = ನಮ್ಮ , **ಗುರೂಣಾಂ** = ಗುರುಗಳ, (ಶ್ರೀ ರಾಘವೇಂದ್ರತೀರ್ಥ-ಗುರುಸಾರ್ವಭೌಮರ)

**ಆಧಿಕ್ಯಂ** = ಅನೇಕ ಗುಣಗಳಿಂದ ಉಂಟಾದ ಶ್ರೇಷ್ಠತ್ವವನ್ನು (ಮಹಿಮೆಯನ್ನು)

**ಕಃ ವಾ ಕವಿಃ** = ಯಾವ ಕವಿಯು ತಾನೇ,

**ಅನುವರ್ಣಯೇತ್** = ಸಂಪೂರ್ಣವಾಗಿ (ಕ್ರಮದಿಂದ) ವರ್ಣಿಸಿಯಾನು ?

**ತಥಾ ಅಪಿ** = ಸಂಪೂರ್ಣವಾಗಿ ವರ್ಣಿಸಲು ಶಕ್ತನಾಗದಿದ್ದರೂ,

**ತತ್ಪ್ರಸಾದೇನ** = ಆ ಗುರುವರ್ಯರ ಅನುಗ್ರಹದಿಂದ

**ಅಹಂ** = ನಾನು

**ಭಕ್ತ್ಯಾ** = ಯಥಾಯೋಗ್ಯವಾಗಿ ಗುರುಗಳ ಮಾಹಾತ್ಮ್ಯಜ್ಞಾನಪೂರ್ವಕ ಸುದೃಢ ಸ್ನೇಹದಿಂದ,

**ಕಿಂಚಿತ್** = ಸ್ವಲ್ಪ ಭಾಗವನ್ನು (ಕೆಲವು ಗುಣಗಳ ಸಮುದಾಯವನ್ನು)

**ವದಾಮಿ** = ಹೇಳುತ್ತೇನೆ.

**ತಾತ್ಪರ್ಯ** — ನಮ್ಮ ಗುರುಗಳಾದ ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು ಜ್ಞಾನ, ಭಕ್ತಿ, ವೈರಾಗ್ಯ, ತಪಸ್ಸು ಮುಂತಾದ ಯೋಗ್ಯವಾದ ಅಸಂಖ್ಯ ಕಲ್ಯಾಣ ಗುಣಗಳ ಗಣಿಯಾಗಿದ್ದಾರೆ.ಅವರ ಮಹಿಮಾತಿಶಯಗಳನ್ನು ಸಂಪೂರ್ಣವಾಗಿ ವರ್ಣಿಸಲು ಜಗತ್ತಿನಲ್ಲಿ ಯಾವ ಕವಿಯೂ ಸಮರ್ಥನಲ್ಲ, ಆದರೂ ನಾನು ಅವರ ಪರಮಾನು-

ಗ್ರಹದಿಂದ ಅವರಲ್ಲಿರುವ ಪರಮ ಗುರುಭಕ್ತಿಯಿಂದ ಬಲವನ್ನು ಪಡೆದು ಅವರ ಅಸಾಧಾರಣ ಗುಣಗಳಲ್ಲಿ ಕೆಲವು ಭಾಗಗಳನ್ನು ಸ್ವಲ್ಪ ಮಟ್ಟಿಗೆ ವರ್ಣಿಸುತ್ತೇನೆ ಎಂದು ಭಾವ.

**ವಿಗ್ರಹ —**

**ಅಸ್ಮದ್ಗುರೂಣಾಂ —** ಅಸ್ಮಾಕಂ ಗುರವಃ ಅಸ್ಮದ್ಗುರವಃ, ತೇಷಾಂ ಅಸ್ಮದ್ಗುರೂಣಾಮ್ ।

**ಆಧಿಕ್ಯಂ —** ಅಧಿಕಾನಾಂ ಭಾವಃ ಆಧಿಕ್ಯಮ್ ।

**ತತ್ಪ್ರಸಾದೇನ —** ತೇಷಾಂ ಪ್ರಸಾದಃ ತತ್ಪ್ರಸಾದಃ, ತೇನ ತತ್ಪ್ರಸಾದೇನ ।

**ಕ್ರಿಯಾಪದ —**

'ಅನು' ಉಪಸರ್ಗಪೂರ್ವಕಾತ್ 'ವರ್ಣ' ವರ್ಣಕ್ರಿಯಾವಿಸ್ತಾರಗುಣವಚನೇಷು, ಇತ್ಯುಕ್ತಾತ್ ಗುಣವಚನಾರ್ಥಕಾತ್ (ಸ್ತೋತ್ರಾರ್ಥಕಾತ್) ವರ್ಣಧಾತೋಃ ಚುರಾದಿಣಿಜಂತಾತ್ ಸಕರ್ಮಕಾತ್ ಕರ್ತರಿ ಪರಸ್ಮೈಪದಿನಃ ವಿಧಿಲಿಙ್ ಪ್ರಥಮಪುರುಷೇ ಏಕವಚನೇ ವರ್ಣಯೇತ್ ಇತಿ ರೂಪಮ್ ।

| | | |
|---|---|---|
| ವರ್ಣಯೇತ್, | ವರ್ಣಯೇತಾಂ, | ವರ್ಣಯೇಯುಃ । |
| ವರ್ಣಯೇಃ, | ವರ್ಣಯೇತಂ, | ವರ್ಣಯೇತ । |
| ವರ್ಣಯೇಯಂ, | ವರ್ಣಯೇವ, | ವರ್ಣಯೇಮ । |

ವದ ವ್ಯಕ್ತಾಯಾಂ ವಾಚಿ, ಇತಿ ವ್ಯಕ್ತವಾಗರ್ಥಕಾತ್ ವದಧಾತೋಃ ಸಕರ್ಮಕಾತ್ ಪರಸ್ಮೈಪದಿನಃ ವರ್ತಮಾನೇ ಲಟ್ ಉತ್ತಮಪುರುಷೇ ಏಕವಚನೇ ವದಾಮಿ ಇತಿ ರೂಪಮ್ ।

| | | |
|---|---|---|
| ವದತಿ, | ವದತಃ, | ವದಂತಿ । |
| ವದಸಿ, | ವದಥಃ, | ವದಥ । |
| ವದಾಮಿ, | ವದಾವಃ, | ವದಾಮಃ । |

**ಪ್ರಯೋಗ —** ಕೋ ವಾ ಕವಿಃ ಅಸ್ಮದ್ಗುರೂಣಾಂ ಆಧಿಕ್ಯಂ ಅನುವರ್ಣಯೇತ್ ? (ಕರ್ತರಿ).

ಕೇನ ವಾ ಕವಿನಾ ಅಸ್ಮದ್ಗುರೂಣಾಂ ಆಧಿಕ್ಯಂ ಅನುವರ್ಣ್ಯೇತ । (ಕರ್ಮಣಿ).

ಅಹಂ ಭಕ್ತ್ಯಾ ಕಿಂಚಿದ್ ವದಾಮಿ । (ಕರ್ತರಿ).

ಮಯಾ ಭಕ್ತ್ಯಾ ಕಿಂಚಿತ್ ಉಚ್ಯತೇ । (ಕರ್ಮಣಿ).

**ಅಲಂಕಾರ —** ಯಾರಿಗೂ ನಮ್ಮ ಗುರುವರ್ಯರ ಮಹಿಮೆಯನ್ನು ಸಂಪೂರ್ಣವಾಗಿ ವರ್ಣಿಸಲು ಸಾಧ್ಯವಿಲ್ಲ ಎಂದು ಹೇಳಿ ಹಾಗಾದರೆ ನೀನು ಹೇಗೆ ವರ್ಣಿಸುತ್ತೀಯೇ ಎಂದು ಸಮರ್ಥನೀಯವಾದ ಅರ್ಥವನ್ನು ಸಮರ್ಥಿಸಿದ್ದರಿಂದ ಪದಾರ್ಥಹೇತುಕ ಕಾವ್ಯಲಿಂಗಾಲಂಕಾರವಿದೆ.

'ಕಾವ್ಯಲಿಂಗಂ ಸಮರ್ಥ್ಯಾರ್ಥಸಮರ್ಥನಮುದೀರತೇ' ಎಂದು ಅದರ ಲಕ್ಷಣ, ಜಯೀಂದ್ರೋದಯಂ ಸ್ಪರ್ಧಾಮದ್ಧಾ ತ್ಯಜತ ಪಂಡಿತಾಃ ಎಂದು ಉದಾಹರಣೆಯನ್ನೂ ಶ್ರೀಸುಧೀಂದ್ರರು ಅಲಂಕಾರಮಂಜರಿಯಲ್ಲಿ ಹೇಳಿದ್ದಾರೆ. ಅಥವಾ ಸ್ವಯಮುಕ್ತವಾದುದಕ್ಕೆ ವಿಚಾರಣೆಯ ಮೂಲಕ ಪ್ರತಿಷೇಧವಿದ್ದರೆ ಆಕ್ಷೇಪಾಲಂಕಾರ ಎಂಬಂತೆ ಇಲ್ಲಿಯೂ ಪದಾರ್ಥಹೇತುಕ ಕಾವ್ಯಲಿಂಗಾನುಪ್ರಾಣಿತವಾದ ಆಕ್ಷೇಪಾಲಂಕಾರವನ್ನು ಹೇಳಬಹುದು.



**ಅವತಾರಿಕಾ —** 'ಭಕ್ತ್ಯಾಕಿಂಚಿತ್ ವದಾಮಿ' ಎಂದು ಹಿಂದಿನ ಶ್ಲೋಕದಲ್ಲಿ ಪ್ರತಿಜ್ಞೆ ಮಾಡಿದ ವಿಷಯ-ವನ್ನೇ ಮುಂದಿನ ಹದಿನಾಲ್ಕು ಶ್ಲೋಕಗಳಿಂದ ಕುಲಕದಿಂದ (ಐದು ಅಥವಾ ಐದಕ್ಕಿಂತ ಹೆಚ್ಚು ಶ್ಲೋಕಗಳಿಗೆ ಏಕಕ್ರಿಯಾನ್ವಯ ಬಂದರೆ ಕುಲಕ) ವಿಚಿತ್ರವಾದ ಶೈಲಿಯಿಂದ ಕೆಲವು ಮಹಿಮಾತಿಶಯಗಳನ್ನು ಕವಿಗಳು ಸ್ತೋತ್ರ ಮಾಡುತ್ತಾರೆ —

**ದೇವಾನಾಮಿವ ದೇವೇಂದ್ರೋ ಯೋ ದತ್ತ ಇವ ಯೋಗಿನಾಮ್ ।**
**ದುಗ್ಧಾಬ್ಧಿರಿವ ಸಿಂಧೂನಾಂ ಗುರೂಣಾಮಿವ ಪೂರ್ಣಧೀಃ ॥ 27 ॥**

**ಪದಚ್ಛೇದ —** ದೇವಾನಾಂ, ಇವ, ದೇವೇಂದ್ರಃ, ಯಃ, ದತ್ತಃ, ಇವ, ಯೋಗಿನಾಂ, ದುಗ್ಧಾಬ್ಧಿಃ, ಇವ, ಸಿಂಧೂನಾಂ, ಗುರೂಣಾಂ, ಇವ, ಪೂರ್ಣಧೀಃ ।

**ಅನ್ವಯ —** ಯಃ ದೇವಾನಾಂ ದೇವೇಂದ್ರಃ ಇವ, ಯೋಗಿನಾಂ ದತ್ತಃ ಇವ, ಸಿಂಧೂನಾಂ ದುಗ್ಧಾಬ್ಧಿಃ ಇವ, ಗುರೂಣಾಂ ಪೂರ್ಣಧೀಃ ಇವ (ವರ್ತತೇ), ತಸ್ಮಾತ್ ಮಹಾಮಹಿಮ್ನೇ ಅಸ್ಮೈ ಮಮ ಮನಃ ಸ್ಪೃಹಯತೇ । ಎಂಬ 41ನೇ ಪದ್ಯದ ಜೊತೆಗೆ ಏಕಾನ್ವಯ.

**ಅನ್ವಯಾರ್ಥ —**

**ಯಃ** = ಯಾವ ಶ್ರೀರಾಘವೇಂದ್ರ ಗುರುಗಳು
**ದೇವಾನಾಂ** = ದೇವತೆಗಳ ಮಧ್ಯದಲ್ಲಿ
**ದೇವೇಂದ್ರಃ ಇವ** = ದೇವೇಂದ್ರನಂತೆಯೂ,
**ಯೋಗಿನಾಂ** = ಯಮನಿಯಮಾದಿಯೋಗಸಂಪನ್ನರ ಮಧ್ಯದಲ್ಲಿ
**ದತ್ತ ಇವ** = ದತ್ತಾತ್ರೇಯನಂತೆಯೂ,
**ಸಿಂಧೂನಾಂ** = ಸಮುದ್ರಗಳ ಮಧ್ಯದಲ್ಲಿ
**ದುಗ್ಧಾಬ್ಧಿಃ ಇವ** = ಕ್ಷೀರ ಸಮುದ್ರದಂತೆಯೂ
**ಗುರೂಣಾಂ** = ಗುರುಗಳ ಮಧ್ಯದಲ್ಲಿ
**ಪೂರ್ಣಧೀಃ ಇವ** = ಸರ್ವಜ್ಞರಾದ ಆನಂದತೀರ್ಥಭಗವತ್ಪಾದಾಚಾರ್ಯರಂತೆಯೂ,
(**ವರ್ತತೇ** = ಇರುತ್ತಾರೋ)
(**ತಸ್ಮಾತ್** = ಆದುದರಿಂದ)
**ಮಹಾಮಹಿಮ್ನೇ** = ಅತಿಶಯ ಮಹಿಮೆಯುಳ್ಳ
**ಅಸ್ಮೈ** = ಈ ಶ್ರೀಗುರುರಾಜರ ವಿಷಯದಲ್ಲಿ,
**ಮಮ** = ನನ್ನ
**ಮನಃ** = ಮನಸ್ಸು
**ಸ್ಪೃಹಯತೇ** = ಆಸೆ ಪಡುತ್ತದೆ, ರಮಿಸುತ್ತದೆ.

**ತಾತ್ಪರ್ಯ —** ದೇವತ್ವವೆಂಬ ಜಾತಿಯಿಂದ ಕೂಡಿದ ಎಲ್ಲಾ ಸಜಾತೀಯ ಚಂದ್ರ ಸೂರ್ಯಾದಿ ದೇವತೆ-ಗಳ ಮಧ್ಯದಲ್ಲಿ ಇಂದ್ರದೇವರು ಪರಮೈಶ್ವರ್ಯವುಳ್ಳವರಾಗಿ ಶೋಭಿಸುತ್ತಾರೆ ಹಾಗೆಯೇ ನಮ್ಮ ಗುರುಪಾದರು

ಗುರುತ್ವವೆಂಬ ಧರ್ಮವುಳ್ಳ ಸಜಾತೀಯರಾದ ಅಂದಿನ ಸಕಲ ಗುರುಗಳಲ್ಲಿರುವ ಐಶ್ವರ್ಯಗಳಿಗಿಂತಲೂ ಮಿಗಿಲಾದ ಅನೇಕ ವಿಧವಾದ ಲೌಕಿಕ, ವೈದಿಕ ಐಶ್ವರ್ಯಗಳಿಂದ ಕೂಡಿದ್ದಾರೆ.

ಯೋಗವೆಂಬ ಧರ್ಮದಿಂದ ಕೂಡಿದ ಸಜಾತೀಯರಾದ ಸಮಸ್ತಯೋಗಿಗಳ ಮಧ್ಯದಲ್ಲಿ ದತ್ತಾತ್ರೇಯರು ಹೇಗೆ ಅತಿಶಯವಾದ ಯಮಾದಿನಿದಿಧ್ಯಾಸನ ಪರ್ಯಂತರವಾದ ಯೋಗವುಳ್ಳವರಾಗಿದ್ದಾರೋ ಅದರಂತೆ ಶ್ರೀರಾಯರು ಉತ್ತಮೋತ್ತಮ ಯೋಗಿವರ್ಯರಾಗಿದ್ದಾರೆ.

ತನ್ನಂತಿರುವ ಎಲ್ಲ ಸಮುದ್ರಗಳಿಗಿಂತಲೂ ಅತಿಗಂಭೀರವಾಗಿದ್ದು ತನ್ನನ್ನು ಸೇವಿಸುವವರಿಗೆ ಅಜರಾಮರತ್ವವನ್ನು ಕೊಡುವ ಅತ್ಯಂತ ಶ್ರೇಷ್ಠವಾದ ಕ್ಷೀರ ಸಮುದ್ರದಂತೆ ಸಕಲ ಗುರುಗಳಿಗೂ ಮಿಗಿಲಾಗಿ ತನ್ನನ್ನು ಆಶ್ರಯಿಸಿದವರಿಗೆ ಇವರು ಅನುಗ್ರಹ ಮಾಡುತ್ತಾರೆ. ಜ್ಞಾನದ ವಿಷಯದಲ್ಲಿ ಗುರುಗಳೆಂದು ಅಭಿಮತರಾದ ಸಕಲ ಪರಮಹಂಸಾದಿ ಗುರುಗಳಿಗಿಂತಲೂ ಸರ್ವಜ್ಞತಮರಾದ ಶ್ರೇಷ್ಠರಾದ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಂತೆ ಇವರು ಅಧಿಕ ಜ್ಞಾನವುಳ್ಳವರು. ಆದುದರಿಂದ ಇಂತಹ ಮಹಾಮಹಿಮರಾದ ಶ್ರೀರಾಘವೇಂದ್ರ ಗುರುಗಳಲ್ಲಿಯೇ ನನ್ನ ಮನಸ್ಸು ರಮಿಸುತ್ತದೆ ಎಂದು ಭಾವ.

**ವಿಶೇಷಾಂಶ** — ಮುಂದೆ 41ನೆಯ ಪದ್ಯದಲ್ಲಿ ಕವಿಗಳು 'ತಸ್ಮಾತ್ ಮಹಾಮಹಿಮ್ನೇಽಸ್ಮೈ ಮನಃ ಸ್ಪೃಹಯತೇ ಮಮ' ಎಂದು ಹೇಳಿದ್ದಾರೆ. ಆದುದರಿಂದ ಹಿಂದಿನ 14ಪದ್ಯಗಳ ಕುಲಕದಲ್ಲಿ ಪ್ರತಿಯೊಂದು ಪದ್ಯದಲ್ಲಿಯೂ, 'ತಸ್ಮಾತ್ ಮಹಾಮಹಿಮ್ನೇಽಸ್ಮೈಮನಃ ಸ್ಪೃಹಯತೇ ಮಮ' ಆದ್ದರಿಂದ ಇಂತಹ ಮಹಾಮಹಿಮರಾದ ಶ್ರೀರಾಘವೇಂದ್ರಗುರುಪಾದರಲ್ಲಿ ನನ್ನ ಮನಸ್ಸು ರಮಿಸುತ್ತಿದೆ ಎಂದು ಸೇರಿಸಿಕೊಂಡು ತಾತ್ಪರ್ಯವನ್ನು ತಿಳಿಯಬೇಕು.

ದೇವಾನಾಂ, ಯೋಗಿನಾಂ, ಸಿಂಧೂನಾಂ, ಗುರೂಣಾಂ, ಎಂಬಲ್ಲಿ 'ಯತಶ್ಚ ನಿರ್ಧಾರಣೇ' ಎಂಬ ಸೂತ್ರದಿಂದ ನಿರ್ಧಾರಣ ಷಷ್ಠೀ ಎಂದು ತಿಳಿಯಬೇಕು. ಆಗ ಮಧ್ಯೇ ಎಂಬ ಪದವನ್ನು ಸೇರಿಸಿ ಅರ್ಥ ಹೇಳಬೇಕು. 'ಗವಾಂ ಕೃಷ್ಣಾ ಬಹುಕ್ಷೀರಾ' ಗೋವುಗಳ ಮಧ್ಯದಲ್ಲಿ ಕಪ್ಪು ಬಣ್ಣದ ಗೋವು ಹೆಚ್ಚು ಹಾಲುಳ್ಳದ್ದು ಎಂಬಂತೆ.

ಇಂದ್ರ ಎಂಬ ಶಬ್ದವು 'ಇದಿ ಪರಮೈಶ್ವರ್ಯೇ' ಎಂಬ ಧಾತುವಿನಿಂದ ಹುಟ್ಟಿದೆ. ಪರಮೈಶ್ವರ್ಯವು ಇಂದ್ರನಿಗೂ ಶ್ರೀಗುರುಗಳಿಗೂ ಸಾಧಾರಣಧರ್ಮ. ದೇವತೆಗಳೆಲ್ಲರೂ ಇಂದ್ರನಿಗೆ ದೇವತ್ವವೆಂಬ ಧರ್ಮದಿಂದ ಸಜಾತೀಯರಾದರೂ ಅವರ ಮಧ್ಯದಲ್ಲಿ ಇಂದ್ರನು ಪರಮೈಶ್ವರ್ಯಶಾಲಿಯಾಗಿರುವಂತೆ ಗುರುತ್ವ (ಉಪದೇಶಕತ್ವ) ಧರ್ಮದಿಂದ ಸಜಾತೀಯರಾದ ಗುರುಗಳ ಮಧ್ಯದಲ್ಲಿ ಇವರು ಬಹಳವಾದ ಲೌಕಿಕ ಸಂಪತ್ತಿನಿಂದಲೂ, ವೈದಿಕ ಶಾಸ್ತ್ರ, ಜ್ಞಾನರೂಪ ಸಂಪತ್ತಿನಿಂದಲೂ, ಅಲೌಕಿಕವಾದ ಆಧ್ಯಾತ್ಮಿಕ ಜ್ಞಾನ ಸಂಪತ್ತಿನಿಂದಲೂ ಕೂಡಿರುವವರು.

ವಿಷ್ಣುವಿನ ಅವತಾರರಾದ ದತ್ತಾತ್ರೇಯರು ಹೇಗೆ ಯಮಾದಿ ಅಷ್ಟಾಂಗ ಯೋಗ ಸಂಪನ್ನರೋ, ವಿಶೇಷತಃ ನಿದಿಧ್ಯಾಸನ (ಸ್ವಾತ್ಮಸ್ವರೂಪಧ್ಯಾನ ಸಂಪನ್ನರೋ) ಅದರಂತೆ ಪರಮಾತ್ಮನ ವಿಶೇಷವಾದ ಧ್ಯಾನ ಅಪರೋಕ್ಷ ಜ್ಞಾನಸಂಪನ್ನರಾಗಿದ್ದಾರೆ ಶ್ರೀಗುರುಗಳು.

ಹೇಗೆ ಕ್ಷೀರ ಸಮುದ್ರವು ತನ್ನನ್ನು ಸೇವಿಸಿದವರಿಗೆ ಮುಪ್ಪು ಮರಣಗಳನ್ನು ಕಳೆದು ಸರ್ವಾಭೀಷ್ಟಗಳನ್ನು ಕೊಡುತ್ತದೆಯೋ ಅದರಂತೆಯೇ ಶ್ರೀಗುರುರಾಜರೂ ಸರ್ವಾಭೀಷ್ಟಪ್ರದರು. ಸಜಾತೀಯವಾದ ಬೇರೆ ಸಮುದ್ರಗಳಿಗಿಂತ ಕ್ಷೀರಸಮುದ್ರವು ಹೇಗೆ ಶ್ರೇಷ್ಠವೋ ಹಾಗೆಯೇ ಶ್ರೀರಾಯರು ಎಲ್ಲಾ ಗುರುಗಳಿಗಿಂತ ಶ್ರೇಷ್ಠರು. ಜ್ಞಾನವಿಷಯದಲ್ಲಿ ಗುರುಗಳೆಲ್ಲರಿಗಿಂತಲೂ ಶ್ರೇಷ್ಠರಾದ ಶ್ರೀಮದಾನಂದತೀರ್ಥರಂತೆ ಇರುವರು.

ವಿಗ್ರಹ —

**ದೇವೇಂದ್ರಃ** — ದೇವಾನಾಂ ಇಂದ್ರಃ ದೇವೇಂದ್ರಃ ।

**ದುಗ್ಧಾಬ್ಧಿಃ** — ದುಗ್ಧಸ್ಯ ಅಬ್ಧಿಃ ದುಗ್ಧಾಬ್ಧಿಃ । (ಅಪಃ ಅಸ್ಮಿನ್ ಧೀಯಂತೇ ಇತಿ ಅಬ್ಧಿಃ ಎಂಬ ವ್ಯುತ್ಪತ್ತಿಯಿಂದ ಅಬ್ಧಿ ಶಬ್ದವು ಜಲಾಶಯ ಎಂಬ ಅರ್ಥವನ್ನು ಕೊಡುತ್ತದೆ. ಆದರೂ ಇಲ್ಲಿ ದುಗ್ಧ ಎಂಬ ಪದವಿರುವುದರಿಂದ ಅಬ್ಧಿ ಶಬ್ದಕ್ಕೆ ರೂಢಿಯಿಂದ ದ್ರವ ವಸ್ತುವಿನ ಆಶ್ರಯ ಎಂದು ಅರ್ಥವನ್ನು ಇಟ್ಟುಕೊಳ್ಳಬೇಕು.)

**ಪೂರ್ಣಧೀಃ** — ಪೂರ್ಣಾ ಧೀಃ ಯಸ್ಯ ಸಃ ಪೂರ್ಣಧೀಃ ।

**ಅಲಂಕಾರ** — ಇಲ್ಲಿ ಗುರುರಾಜರು ಉಪಮೇಯ, ದೇವೇಂದ್ರ, ದತ್ತ, ದುಗ್ಧಾಬ್ಧಿ, ಪೂರ್ಣಧೀಃ ಈ ನಾಲ್ಕು ಮಂದಿ ಮಾಲಾಕಾರವಾಗಿ ಉಪಮಾನರು. ಸಜಾತೀಯಶ್ರೇಷ್ಠತ್ವವೆಂಬುದು ಉಭಯಸಾಧಾರಣಧರ್ಮ. ಇವ ಎಂಬುದು ಉಪಮಾವಾಚಕ ಶಬ್ದ. ಹೀಗೆ ಇಲ್ಲಿ ಮಾಲಾ ಪೂರ್ಣೋಪಮಾಲಂಕಾರವಿದೆ.



**ಅವತಾರಿಕಾ** — ಗುರುರಾಜರ ವರ್ಣನೆಯನ್ನು ಕವಿಗಳು ಮುಂದುವರಿಸುತ್ತಿದ್ದಾರೆ —

**ತಿಗ್ಮಾಂಶುರಿವ ತೇಜಸ್ವೀ ಶೀತಾಂಶುರಿವ ಶೀತಲಃ ।**
**ಯಸ್ಸಿಂಧುರಿವ ಗಂಭೀರೋ ಧರಾಧರ ಇವ ಸ್ಥಿರಃ ॥ 28 ॥**

**ಪದಚ್ಛೇದ** — ತಿಗ್ಮಾಂಶುಃ, ಇವ, ತೇಜಸ್ವೀ, ಶೀತಾಂಶುಃ, ಇವ, ಶೀತಲಃ, ಯಃ, ಸಿಂಧುಃ, ಇವ, ಗಂಭೀರಃ, ಧರಾಧರಃ, ಇವ, ಸ್ಥಿರಃ ।

**ಅನ್ವಯ** — ಯಃ ತಿಗ್ಮಾಂಶುಃ ಇವ ತೇಜಸ್ವೀ, ಶೀತಾಂಶುಃ ಇವ ಶೀತಲಃ, ಸಿಂಧುಃ ಇವ ಗಂಭೀರಃ, ಧರಾಧರಃ ಇವ ಸ್ಥಿರಃ ।

**ಅನ್ವಯಾರ್ಥ** —

**ಯಃ** = ಯಾವ ಶ್ರೀರಾಘವೇಂದ್ರಸ್ವಾಮಿಗಳವರು

**ತಿಗ್ಮಾಂಶು ಇವ** = ಸೂರ್ಯನಂತೆ

**ತೇಜಸ್ವೀ** = ಅತ್ಯಂತ ಪ್ರಕಾಶಶಾಲಿಗಳೂ

**ಶೀತಾಂಶುಃ ಇವ** = ಚಂದ್ರನಂತೆ

**ಶೀತಲಃ** = ಅತಿಶಯವಾಗಿ ತಂಪಾಗಿರುವವರೂ (ಅತ್ಯಂತ ಸೌಮ್ಯರೂ)

**ಸಿಂಧುರಿವ** = ಸಮುದ್ರದಂತೆ

**ಗಂಭೀರಃ** = ಅತ್ಯಂತ ಗಂಭೀರರೂ

**ಧರಾಧರಃ ಇವ** = ಪರ್ವತದಂತೆ

**ಸ್ಥಿರಃ** = ಅಚಂಚಲರೂ (ಆಗಿದ್ದಾರೆ.)

**ತಾತ್ಪರ್ಯ** — ಶ್ರೀಗುರುಸಾರ್ವಭೌಮರು ಸೂರ್ಯನಂತೆ ಇತರ ಪ್ರಕಾಶಗಳನ್ನು ತಿರಸ್ಕರಿಸುವ ಪ್ರಖರ ತೇಜಸ್ಸಿನಿಂದ ಕೂಡಿರುತ್ತಾರೆ. ಚಂದ್ರನಂತೆ ಅತ್ಯಂತ ಸೌಮ್ಯಸ್ವರೂಪರಾಗಿದ್ದು ಭಕ್ತರ ಕಣ್ಮನಗಳಿಗೆ ಶೀತಲರಾಗಿದ್ದಾರೆ. ಸಮುದ್ರದಂತೆ ಅತ್ಯಂತ ಗಂಭೀರಾಶಯವುಳ್ಳವರಾಗಿದ್ದಾರೆ. ಪರ್ವತದಂತೆ ಅತ್ಯಂತ ಸ್ಥಿರವಾಗಿದ್ದು ಏಕನಿಷ್ಠೆ-ಯುಳ್ಳವರಾಗಿದ್ದಾರೆ. (ಆದ್ದರಿಂದ ಮಹಾಮಹಿಮಶಾಲಿಗಳಾದ ಇವರನ್ನು ಸ್ತೋತ್ರ ಮಾಡಲು ನನ್ನ ಮನಸ್ಸು ಆಸೆಪಡುತ್ತಿದೆ.)

**ವಿಗ್ರಹ** —

**ತಿಗ್ಮಾಂಶುಃ** — ತಿಗ್ಮಾಃ ಅಂಶವಃ ಯಸ್ಯ ಸಃ ತಿಗ್ಮಾಂಶುಃ । (ಸೂರ್ಯಃ)

**ತೇಜಸ್ವೀ** — ತೇಜಃ ಅಸ್ಯ ಅಸ್ತೀತಿ ತೇಜಸ್ವೀ ।

**ಶೀತಾಂಶುಃ** — ಶೀತಾಃ ಅಂಶವಃ ಯಸ್ಯ ಸಃ ಶೀತಾಂಶುಃ ।

**ಧರಾಧರಃ** — ಧರತೀತಿ ಧರಃ, ಧರಾಯಾಃ ಧರಃ ಧರಾಧರಃ ।

**ವ್ಯಾಕರಣವಿಶೇಷ** — ತೇಜಸ್ವೀ ಎಂಬಲ್ಲಿ 'ಅಸ್ ಮಾಯಾ ಮೇಧಾಸ್ರಜೋ ವಿನಿಃ' (5-2-121) ಎಂಬ ಸೂತ್ರದಿಂದ 'ವಿನಿ' ಪ್ರತ್ಯಯ. ನಕಾರಾಂತ 'ತೇಜಸ್ವಿನ್ ಶಬ್ದ'. ತೇಜಸ್ವೀ, ತೇಜಸ್ವಿನೌ, ತೇಜಸ್ವಿನಃ ।

**ಅಲಂಕಾರ** — ಇಲ್ಲಿಯೂ ಮಾಲಾಪೂರ್ಣೋಪಮಾಲಂಕಾರವಿದೆ. ಉಪಮಾನ ಉಪಮೇಯ ಸಾಧಾ-ರಣಧರ್ಮ ಸಾದೃಶ್ಯವಾಚಕ ಇವಾದಿ ಶಬ್ದ ಈ ನಾಲ್ಕೂ ಇಲ್ಲಿ ಇವೆ.



**ಅವತರಣಿಕಾ**— ಈ ಪದ್ಯದಲ್ಲಿ ಶ್ರೀಗುರುರಾಜರು ಶಾರದೆಯ ಅನುಗ್ರಹಬಲದಿಂದಲೇ ವಿದ್ಯಾಸಂಪತ್ತನ್ನು ಪಡೆದು ಮಹಾಮಹಿಮರಾಗಿದ್ದಾರೆಂದು ವರ್ಣಿಸುತ್ತಾರೆ —

**ಶಾರದಾಯಾಃ ದಯಾಮೇವ ಶಾಸ್ತ್ರಾಣಾಂ ಪರಿಶೀಲನೇ ।**
**ವಿವಿಧಗ್ರಂಥಕರಣೇ ಯೋಽಸಹಾಯಃ ಸಮಾಶ್ರಿತಃ ॥ 29 ॥**

**ಪಾಠಾಂತರ — 1. ಯೋಸಹಾಯಃ ಸಮಾಶ್ರಿತಃ । 2. ಯಃ ಸಾಹಾಯ್ಯಂ ಸಮಾಶ್ರಿತಃ ।**

**ಪದಚ್ಛೇದ** — ಶಾರದಾಯಾಃ, ದಯಾಂ, ಏವ, ಶಾಸ್ತ್ರಾಣಾಂ, ಪರಿಶೀಲನೇ, ವಿವಿಧಗ್ರಂಥಕರಣೇ, ಯಃ, ಸಹಾಯಂ (ಸಾಹಾಯ್ಯಂ) ಸಮಾಶ್ರಿತಃ (ಯಃ ಅಸಹಾಯಃ ಸಮಾಶ್ರಿತಃ) ।

**ಅನ್ವಯ** — ಯಃ ಶಾಸ್ತ್ರಾಣಾಂ ಪರಿಶೀಲನೇ, ವಿವಿಧಗ್ರಂಥಕರಣೇ, ಅಸಹಾಯಃ, ಶಾರದಾಯಾಃ ದಯಾಮೇವ ಸಮಾಶ್ರಿತಃ (ಯಃ ............ ಶಾರದಾಯಾಃ ದಯಾಮೇವ ಸಾಹಾಯ್ಯಂ, (ಸಹಾಯಂ) ಸಮಾಶ್ರಿತಃ ।

**ಅನ್ವಯಾರ್ಥ** —

**ಯಃ** = ಯಾವ ಶ್ರೀರಾಘವೇಂದ್ರಗುರುರಾಜರು

**ಶಾಸ್ತ್ರಾಣಾಂ ಪರಿಶೀಲನೇ** = ಯಥಾವತ್ತಾಗಿ,ಸಮರ್ಥತರವಾದ ಅಭ್ಯಾಸಕ್ಕಾಗಿ ಸರ್ವಶಾಸ್ತ್ರ ವಿಷಯ-ಗಳ ಸರಿಯಾದ ಜ್ಞಾನಕ್ಕಾಗಿ

**ವಿವಿಧಗ್ರಂಥಕರಣೇ** = ನಾನಾವಿಧವಾದ ಟೀಕಾ ಟಿಪ್ಪಣೀ ಖಂಡಾರ್ಥರೂಪವಾದ ಅನೇಕ ಗ್ರಂಥಗಳ ನಿರ್ಮಾಣಕ್ಕಾಗಿಯೂ

**ಅಸಹಾಯಃ** = ಇತರ ಮಾನವರ ಸಹಕಾರ ರಹಿತರಾಗಿದ್ದು

**ಶಾರದಾಯಾಃ** = ವಿದ್ಯಾಲಕ್ಷ್ಮಿಯ, (ಸರಸ್ವತೀದೇವಿಯ)

**ದಯಾಮೇವ** = ದಯೆಯನ್ನೇ

**ಸಮಾಶ್ರಿತಃ** = ಚೆನ್ನಾಗಿ ಆಶ್ರಯಿಸಿದ್ದಾರೆ. (ಅಂತಹ ಮಹಾಮಹಿಮಶಾಲಿಗಳಾದ ಗುರುಗಳ ವಿಷಯದಲ್ಲಿ ನನ್ನ ಮನಸ್ಸು ಆಸೆ ಪಡುತ್ತಿದೆ.)

**ಅನ್ವಯಾರ್ಥ** — *(ಯಃ ಸಹಾಯಂ ಸಮಾಶ್ರಿತಃ ಎಂಬ ಪಾಠಾನುಸಾರವಾಗಿ)*

**ಯಃ** = ಯಾವ ಶ್ರೀರಾಘವೇಂದ್ರಗುರುಗಳ, ಶಾಸ್ತ್ರಗಳ ಪರಿಶೀಲನೆಯಲ್ಲಿಯೂ ಶಾಸ್ತ್ರಗ್ರಂಥಗಳ ರಚನೆ ಮಾಡುವುದರಲ್ಲಿಯೂ, ವಿದ್ಯಾಲಕ್ಷ್ಮಿಯ

**ದಯಾಮೇವ** = ದಯೆಯನ್ನೇ

**ಸಹಾಯಂ** = ಸಹಾಯವನ್ನಾಗಿ

**ಸಮಾಶ್ರಿತಃ** = ಅವಲಂಬಿಸಿದವರಾಗಿದ್ದಾರೆ.

(ಸಹಾಯ ಶಬ್ದವು ನಿತ್ಯಪುಲ್ಲಿಂಗವಾದ್ದರಿಂದ ವಿಧೇಯ ವಿಶೇಷಣವಾಗಿ ಉಪಯೋಗಿಸಿ-ರುವುದು ಯುಕ್ತವಾಗಿದೆ, ಶೈತ್ಯಂ ಹಿ ಯತ್ ಸಾ ಪ್ರಕೃತಿರ್ಜಲಸ್ಯ' ಎಂಬಂತೆ.)

**ಅನ್ವಯಾರ್ಥ** — *(ಗುರುಪಾದ ಸೇವಾ ವ್ಯಾಖ್ಯಾನದಂತೆ)*

**ಯಃ** = ಯಾವ ಗುರುಗಳ,

**ಶಾಸ್ತ್ರಾಣಾಂ** = ವ್ಯಾಕರಣಾದಿ ಶಾಸ್ತ್ರಗಳ ಪರಿಶೀಲನೆ ಪರಿಚಯ ವಿಷಯದಲ್ಲಿ

**ವಿವಿಧಗ್ರಂಥಕರಣೇ** = ನಾನಾ ವಿಧ ಪ್ರಬಂಧಗಳನ್ನು ರಚಿಸುವ ವಿಷಯದಲ್ಲಿ

**ಶಾರದಾಯಾಃ** = ವಿದ್ಯಾಲಕ್ಷ್ಮಿಯ

**ದಯಾಂ** = ಕೃಪೆಯನ್ನೇ

**ಸಾಹಾಯ್ಯಂ** = ಅವಲಂಬನವನ್ನಾಗಿ

**ಸಮಾಶ್ರಿತಃ** = ಹೊಂದಿದ್ದಾರೆ.

**ತಾತ್ಪರ್ಯ** — ಶ್ರೀರಾಘವೇಂದ್ರ ಗುರುಪಾದರು ತರ್ಕ, ವ್ಯಾಕರಣ, ಮೀಮಾಂಸಾ, ವೇದಾಂತಾದಿ ಸಮಸ್ತ ಶಾಸ್ತ್ರಗಳನ್ನು ಸರಿಯಾಗಿ ಸಮರ್ಥವಾದ ರೀತಿಯಿಂದ ಅಭ್ಯಸಿಸಿ ಎಲ್ಲಾ ಶಾಸ್ತ್ರಾರ್ಥಗಳನ್ನು ಸರಿಯಾಗಿ ತಿಳಿದಿದ್ದಾರೆ. ಹಾಗೆಯೇ ಟೀಕಾ ಟಿಪ್ಪಣೀ ಖಂಡಾರ್ಥರೂಪವಾದ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಮಹತ್ತಾದ ಈ ಜ್ಞಾನಕಾರ್ಯವನ್ನು ಮತ್ತಿತರ ಯಾವ ಮಾನವರ ಸಹಾಯವನ್ನು ಅಪೇಕ್ಷಿಸದೆ ಮಾಡಿದ್ದಾರೆ. ಈ ವಿಷಯದಲ್ಲಿ ವಿದ್ಯಾಲಕ್ಷ್ಮಿಯ ಹಾಗೂ ಶಾರದೆಯ ಸಹಾಯವೊಂದನ್ನೇ ಅವಲಂಬಿಸಿದ್ದಾರೆ. ಇದರಿಂದ ಶಾರದಾದೇವಿಯು ಶ್ರೀಗುರುರಾಜರಿಗೆ ಸರ್ವದಾ ಅನುಗ್ರಹಿಸುತ್ತಿರುವವಳಾಗಿದ್ದಾಳೆ ಎಂಬ ಮಹಾಮಹಿಮೆಯು ತಿಳಿದುಬರುತ್ತದೆ. ಇಂತಹ ಮಹಾಮಹಿಮೆಯುಳ್ಳ ಗುರುವರ್ಯರಲ್ಲಿ ನನ್ನ ಮನಸ್ಸು ರಮಿಸುತ್ತದೆ ಎಂದು ಭಾವ.

**ವಿಗ್ರಹ** —

**ಶಾರದಾ** — ಶರದಿ ಭವಾ (ಪೂಜ್ಯಾ) ಶಾರದಾ ।

**ವಿವಿಧಗ್ರಂಥಕರಣಂ** — ವಿವಿಧಾಶ್ಚ ತೇ ಗ್ರಂಥಾಶ್ಚ ವಿವಿಧಗ್ರಂಥಾಃ, ವಿವಿಧಗ್ರಂಥಾನಾಂ ಕರಣಂ ವಿವಿಧಗ್ರಂಥಕರಣಂ, ತಸ್ಮಿನ್ ।

**ಅಸಹಾಯಃ** — ನ ವಿದ್ಯತೇ ಸಹಾಯಃ ಯಸ್ಯ ಸಃ ಅಸಹಾಯಃ ।

**ಸಮಾಶ್ರಿತಃ** — ಸಮ್ಯಕ್ ಆಶ್ರಿತಃ ಸಮಾಶ್ರಿತಃ । (ಕರ್ತರಿ ಕ್ತ-ಪ್ರತ್ಯಯ)

**ಸಾಹಾಯ್ಯಂ** — ಸಹಾಯ ಏವ ಸಾಹಾಯ್ಯಂ, ತತ್ ।

**ಅಲಂಕಾರ** — ಅಸಹಾಯರಾಗಿ ಶಾಸ್ತ್ರಪರಿಶೀಲನ, ಗ್ರಂಥಕರಣ ಎಂಬ ಕಾರ್ಯವನ್ನು ಶಾರದೆಯ ದಯೆಯಿಂದ ಮಾಡುತ್ತಾರೆ ಎಂದು ಸಮರ್ಥಿಸಿದ್ದರಿಂದ ಕಾವ್ಯಲಿಂಗಾಲಂಕಾರ. 'ಸಮರ್ಥನೀಯಸ್ಯಾರ್ಥಸ್ಯ ಕಾವ್ಯಲಿಂಗಂ ಸಮರ್ಥನಂ' ಎಂದು ಅದರ ಲಕ್ಷಣ.



**ಅವತಾರಿಕಾ** — ಈಗ ಕವಿಗಳು 'ವೇದವ್ರಜಾವನೋದ್ಯುಕ್ತಂ' ಎಂಬ ಪದ್ಯದಿಂದ, ಶ್ರೀಗುರುರಾಜರು ಶಾರದೆಯ ಪರಮಾನುಗ್ರಹವನ್ನು ಸಂಪಾದಿಸಿ, ವಿದ್ಯಾದೇವಿಯನ್ನು ವಶಪಡಿಸಿಕೊಂಡಿದ್ದಾರೆಂದು ಬೇರೊಂದು ಭಂಗಿಯಿಂದ ತಿಳಿಸುತ್ತಿದ್ದಾರೆ —

**ವೇದವ್ರಜಾವನೋದ್ಯುಕ್ತಂ ವಿದ್ಯಾದೇವೀ ವಿಲೋಕ್ಯ ಯಮ್ ।**
**ವ್ಯಸ್ಮರದ್ ಬಹುರೂಪೇಣ ತಪಸ್ಯಂತಂ ಸಮೀರಣಮ್ ॥ 30 ॥**

**ಪದಚ್ಛೇದ** — ವೇದವ್ರಜಾವನೋದ್ಯುಕ್ತಂ, ವಿದ್ಯಾದೇವೀ, ವಿಲೋಕ್ಯ, ಯಂ, ವ್ಯಸ್ಮರತ್, ಬಹುರೂಪೇಣ, ತಪಸ್ಯಂತಂ, ಸಮೀರಣಮ್ ।

**ಅನ್ವಯ** — ವೇದವ್ರಜಾವನೋದ್ಯುಕ್ತಂ ಯಂ ವಿಲೋಕ್ಯ ವಿದ್ಯಾದೇವೀ ಬಹುರೂಪೇಣ ತಪಸ್ಯಂತಂ ಸಮೀರಣಂ ವ್ಯಸ್ಮರತ್ ।

**ಅನ್ವಯಾರ್ಥ** —

**ವೇದವ್ರಜಾವನೋದ್ಯುಕ್ತಂ** — **ವೇದವ್ರಜ** = ವೇದಸಮೂಹಗಳ, **ಅವನ** = ರಕ್ಷಣೆಯಲ್ಲಿ, **ಉದ್ಯುಕ್ತಂ** = ತೊಡಗಿರುವ

**ಯಂ** = ಯಾವ ಗುರುವರ್ಯರನ್ನು

**ವಿಲೋಕ್ಯ** = ನೋಡಿ

**ವಿದ್ಯಾದೇವೀ** = ವಿದ್ಯಾದೇವತೆಯಾದ ಭಾರತಿಯು

**ಬಹುರೂಪೇಣ** = ತ್ರಿಕೋಟಿರೂಪದಿಂದ

**ತಪಸ್ಯಂತಂ** = ತಪಸ್ಸು ಮಾಡುತ್ತಲಿರುವ

**ಸಮೀರಣಂ** = ತನ್ನ ಪತಿಯಾದ ಶ್ರೀಮುಖ್ಯಪ್ರಾಣನನ್ನು

**ವ್ಯಸ್ಮರತ್** = ಮರೆತುಬಿಟ್ಟಳು. (ಮರೆತುಬಿಟ್ಟಳೋ ಎಂಬಂತೆ ಇದ್ದಳು.) (ಗು.ಪಾ.ಸೇ. ವ್ಯಾಖ್ಯಾ ಪ್ರಕಾರವಾಗಿ ವಿಶೇಷವಾಗಿ ಸ್ಮರಿಸಿದಳು.)

**ತಾತ್ಪರ್ಯ** — ಶ್ರೀರಾಘವೇಂದ್ರಗುರುಗಳ ತಮ್ಮ ವೇದವ್ಯಾಖ್ಯಾನ, ಉಪನಿಷತ್ ಖಂಡಾರ್ಥಾದಿ ರಚನೆ, ಶಿಷ್ಯರಿಗೆ ಪಾಠ ಪ್ರವಚನ ಮಾಡುವುದು, ವೇದಾಭ್ಯಾಸ ಮಾಡಿಸುವುದು ಮುಂತಾದ ರೀತಿಯಿಂದ ವೇದ-ಸಮೂಹವನ್ನು ರಕ್ಷಿಸುತ್ತಿದ್ದರು. ಇದನ್ನು ಕಂಡು ಶ್ರೀಭಾರತೀದೇವಿಯು ಮೂರು ಕೋಟಿ ರೂಪಗಳಿಂದ ತಪಸ್ಸು ಮಾಡುತ್ತಿರುವ ತಮ್ಮ ಪತಿಯಾದ ವಾಯುದೇವರನ್ನೇ ಮರೆತುಬಿಟ್ಟವಳಂತೆ ಆದಳು. ವಾಯುದೇವರು ಮಾಡುವ ವೇದರಕ್ಷಣೆಯ ಕಾರ್ಯವನ್ನು ವಾಯುದೇವರ ವಿಶೇಷ ಸನ್ನಿಧಾನಯುಕ್ತರಾದ ರಾಯರೇ ಮಾಡುತ್ತಿರುವು-ದರಿಂದ, ಅವರಲ್ಲಿಯೇ ಅನುಗ್ರಹ ಮಾಡುತ್ತಿರಬೇಕೆಂಬ ಭಾವನೆಯಿಂದ ಅವರ ಸಮೀಪದಲ್ಲಿಯೇ ಸಹಾಯಕ-ಳಾಗಿ ನಿಂತು ಗುರುರಾಜರಲ್ಲಿ ಪರಮಾನುಗ್ರಹವನ್ನು ಮಾಡುತ್ತಿದ್ದಳು.

**ಗು.ಪಾ.ಸೇವಾ ವ್ಯಾಖ್ಯಾಪ್ರಕಾರ** — ವಿದ್ಯಾದೇವಿಯು ಗುರುರಾಜರ ವೇದವ್ಯಾಖ್ಯಾನಾದಿ ಕಾರ್ಯಗಳನ್ನು ಅವಲೋಕಿಸಿ ತನ್ನ ಪತಿಯ ಅಸಾಧಾರಣವಾದ ಜ್ಞಾನಕಾರ್ಯವನ್ನು ನೆನಪಿಗೆ ತಂದುಕೊಂಡಳು ಎಂದು ಭಾವ.

**ವಿಶೇಷ ವಿಷಯ** — ಹಿರಣ್ಯಕಶಿಪೋಃ ಪುತ್ರಃ ಪ್ರಹ್ಲಾದೋ ಭಗವತ್ಪ್ರಿಯಃ ।
ವಾಯುನಾ ಚ ಸಮಾವಿಷ್ಟಃ ಮಹಾಬಲಸಮನ್ವಿತಃ ॥

'ಮಹಾಭಾರತ ತಾತ್ಪರ್ಯ ನಿರ್ಣಯ' ಎಂಬ ಪ್ರಮಾಣಾನುಸಾರವಾಗಿ ಪ್ರಹ್ಲಾದರಲ್ಲಿ ವಾಯುದೇವರ ವಿಶೇಷವಾದ ಆವೇಶವಿದೆ. ಆ ಪ್ರಹ್ಲಾದರ ಅವತಾರರೇ ಶ್ರೀರಾಘವೇಂದ್ರ ಗುರುಗಳು. ಹೀಗೆ ವಾಯುದೇವರ ವಿಶೇಷ ಸನ್ನಿಧಾನವಿರುವುದರಿಂದ ಅಭೇದೋಪಚಾರದಿಂದ ಉರಿಯುತ್ತಿರುವ ಕಟ್ಟಿಗೆ ಕೊಳ್ಳಿಯನ್ನು 'ಇದು ಬೆಂಕಿ' ಎಂದು ಹೇಳುವಂತೆ ಈ ಗುರುಗಳಲ್ಲಿ ವಿಶೇಷಾಧಿಷ್ಠಾನವುಳ್ಳವರು ವಾಯುದೇವರೆಂದು ತಿಳಿದಳು ಎಂದು ಅಭಿ-ಪ್ರಾಯ. ವಾಯುದೇವರು ಅನೇಕ ಅವತಾರಗಳಲ್ಲಿಯೂ ಪರಮಾತ್ಮನ ಪ್ರೀತ್ಯರ್ಥವಾಗಿ ತಪಸ್ಸನ್ನು ಮಾಡುತ್ತಿರು-ತ್ತಾರೆ. ಆ ಅವತಾರಗಳಲ್ಲಿ ಒಂದು ಶ್ರೀಮಧ್ವಾವತಾರ. ಈ ಅವತಾರದಲ್ಲಿ ವಾಯುದೇವರು ವೇದವ್ಯಾಸರ ಸೇವೆಯನ್ನು ಮಾಡುತ್ತಿರುತ್ತಾರೆ. ಅವರು ಋಗ್‌ಭಾಷ್ಯ ರಚನಾದಿಗಳಿಂದ ವೇದಸಮೂಹವನ್ನು ಸಂರಕ್ಷಿಸಿದ್ದರು. ಈ ಶ್ರೀಗುರುಗಳು ವೇದಗಳಿಗೆ ವ್ಯಾಖ್ಯಾನ ಮಾಡಿದ್ದರಿಂದ ಭಾರತೀದೇವಿಯು ತಮ್ಮ ಪತಿಯಾದ ವಾಯುದೇವರ ಕಾರ್ಯವನ್ನು ವಿಶೇಷವಾಗಿ ಸ್ಮರಿಸಿದಳು ಎಂದೂ ಭಾವವು.

**ವಿಗ್ರಹ** —

**ವೇದವ್ರಜಾವನೋದ್ಯುಕ್ತಮ್** — ವೇದಾನಾಂ ವ್ರಜಃ ವೇದವ್ರಜಃ, ವೇದವ್ರಜಸ್ಯ ಅವನಂ ವೇದ-ವ್ರಜಾವನಂ, ವೇದವ್ರಜಾವನೇ ಉದ್ಯುಕ್ತಃ ವೇದವ್ರಜಾವನೋದ್ಯುಕ್ತಃ, ತಮ್ ।

**ವಿದ್ಯಾದೇವೀ** — ವಿದ್ಯಾಯಾಃ ದೇವೀ ವಿದ್ಯಾದೇವೀ ।

**ಬಹುರೂಪೇಣ** — ಬಹು ಚ ತತ್ ರೂಪಂ ಚ ಬಹುರೂಪಂ, ತೇನ ।

**ತಪಸ್ಯಂತಂ** — ತಪಸ್ಯತೀತಿ ತಪಸ್ಯನ್, ತಮ್ ।

**ಸಮೀರಣಮ್** — ಸಮ್ಯಕ್ ಈರಯತೀತಿ ಸಮೀರಣಃ, ತಮ್ ।

**ಕ್ರಿಯಾಪದ** — 'ವಿ' ಪೂರ್ವಕಾತ್ 'ಸ್ಮೃ' ಚಿಂತಾಯಾಂ ಇತಿ ಚಿಂತಾರ್ಥಕಾತ್ ಸ್ಮೃಧಾತೋಃ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಏಕವಚನಮ್ ।

ಅಸ್ಮರತ್, ಅಸ್ಮರತಾಂ, ಅಸ್ಮರನ್ ।
ಅಸ್ಮರಃ, ಅಸ್ಮರತಂ, ಅಸ್ಮರತ ।
ಅಸ್ಮರಂ, ಅಸ್ಮರಾವ, ಅಸ್ಮರಾಮ ।

**ಪ್ರಯೋಗ —** ವಿದ್ಯಾದೇವೀ ಸಮೀರಣಂ ವ್ಯಸ್ಮರತ್ । (ಕರ್ತರಿ).
ವಿದ್ಯಾದೇವ್ಯಾ ಸಮೀರಣಃ ವ್ಯಸ್ಮರ್ಯತ । (ಕರ್ಮಣಿ).

**ಅಲಂಕಾರ —** ವಿಶೇಷವಾಗಿ ಸ್ಮರಿಸಿದಳು ಎಂಬ ಅರ್ಥವನ್ನು ಇಟ್ಟುಕೊಂಡಾಗ ಸ್ಮೃತ್ಯಲಂಕಾರ.

'ಸ್ಮೃತಿಃ ಸ್ಮೃತೌ ಸ್ಮರಾಮ್ಯದ್ರೇಃ ಧೈರ್ಯಂ ದೃಷ್ಟ್ವಾ ಜಯೀಂದ್ರ ತೇ' - ಅಲಂಕಾರಮಂಜರೀ.



**ಅವತಾರಿಕಾ —** ಈ ಕಲಿಕಾಲದಲ್ಲಿ ಸಾಮಾನ್ಯವಾಗಿ ಎಲ್ಲಾ ಸಜ್ಜನರೂ ಜ್ಞಾನರಹಿತರಾಗಿದ್ದಾರೆ. ಅವರನ್ನು ನೋಡಿ ದಯಾಳುಗಳಾದ ಗುರುಸಾರ್ವಭೌಮರು ಅವತಾರ ಮಾಡಿ ಅನೇಕ ಗ್ರಂಥಗಳನ್ನು ರಚಿಸಿ, ಉಪದೇಶಿಸಿ ಯೋಗ್ಯರನ್ನು ಜ್ಞಾನಿಗಳನ್ನಾಗಿ ಮಾಡಿದರು ಎಂದು ಈ ಕೆಳಗಿನ ಪದ್ಯದಿಂದ ಕವಿಗಳು ವರ್ಣಿಸುತ್ತಿದ್ದಾರೆ.

**ಕಲಿಕಾಲಕಲಾಲೂನಮೂಲಜಾಲಕಲಾಲತಾ ।**
**ಯದ್ವಾಗ್ಗಮೃತಸೇಕೇನ ಪುನಃ ಸಂಜಾತಪಲ್ಲವಾ ॥ 31 ॥**

**ಪದಚ್ಛೇದ —** ಕಲಿಕಾಲಕಲಾಲೂನಮೂಲಜಾಲಕಲಾಲತಾ, ಯದ್ವಾಗಮೃತಸೇಕೇನ, ಪುನಃ ಸಂಜಾತ-ಪಲ್ಲವಾ ।

**ಅನ್ವಯ —** ಕಲಿಕಾಲಕಲಾಲೂನಮೂಲಜಾಲಕಲಾಲತಾ ಯದ್ವಾಗಮೃತಸೇಕೇನ ಪುನಃ ಸಂಜಾತಪಲ್ಲವಾ (ಅಭೂತ್) ।

**ಅನ್ವಯಾರ್ಥ —**

**ಕಲಿಕಾಲಕಲಾಲೂನಮೂಲಜಾಲಕಲಾಲತಾ — ಕಲಿಕಾಲ** = ಕಲಿಕಾಲದ, **ಕಲಾ** = ಲೇಶದಿಂದ (ಸಾಮರ್ಥ್ಯದಿಂದ), **ಲೂನ** = ಕತ್ತರಿಸಿ ಹೋದ, **ಮೂಲ** = ಬೇರುಗಳ, **ಜಾಲ** = ಸಮೂಹ-ವುಳ್ಳ, **ಕಲಾಲತಾ** = (ವೇದ) ವಿದ್ಯೆಯೆಂಬ ಬಳ್ಳಿಯು

**ಯದ್ವಾಗಮೃತಸೇಕೇನ — ಯತ್** = ಯಾವ ಶ್ರೀರಾಘವೇಂದ್ರಸ್ವಾಮಿಗಳವರ, **ವಾಕ್** = ವ್ಯಾಖ್ಯಾನ ರೂಪವಾದ ಗ್ರಂಥವೆಂಬ (ಮಾತೆಂಬ), **ಅಮೃತಸೇಕೇನ** = ಅಮೃತಸೇಚನದಿಂದ (ಸಿಂಪಡಿ-ಸುವಿಕೆಯಿಂದ)

**ಪುನಃ** = ಮತ್ತೆ

**ಸಂಜಾತಪಲ್ಲವಾ** = ಚಿಗುರಿದ ಕೋಮಲವಾದ ಎಲೆ ಉಳ್ಳದ್ದಾಗಿ

(**ಅಭೂತ್** = ಆಯಿತು).

**ತಾತ್ಪರ್ಯ —** ಕಲಿಯುಗದ ಸಾಮರ್ಥ್ಯವು ಅಸಾಧಾರಣವಾದದ್ದು. ಅದರ ಸಾಮರ್ಥ್ಯದ ಲೇಶದಿಂದಲೇ ವೇದವಿದ್ಯೆ ಮತ್ತಿತರ ಸದ್ವಿದ್ಯೆಗಳು ಕೊಡಲಿಯ ಏಟಿನಿಂದ ಬಳ್ಳಿಯ ಬೇರುಗಳು ಕತ್ತರಿಸಿ ಹೋಗುವಂತೆ ಬುಡ-

ಸಹಿತವಾಗಿ ಕತ್ತರಿಸಿ ಹೋಗಿದ್ದವು. ಬೇರು ಕತ್ತರಿಸಿದ ಬಳ್ಳಿಯೂ ಕೂಡ ಪುನಃ ನೆಟ್ಟು ಅಮೃತಜಲಸೇಚನ ಮಾಡಿದರೆ ಬದುಕಿ ಚಿಗುರುವಂತೆ ಶ್ರೀರಾಘವೇಂದ್ರಗುರುಸಾರ್ವಭೌಮರ ವೇದವ್ಯಾಖ್ಯಾನಾದಿ ಗ್ರಂಥಗಳಿಂದ ಅವರ ಮಾತುಗಳೆಂಬ ಅಮೃತಸೇಚನದಿಂದಲೂ ವೇದಾದಿ ವಿದ್ಯಾಲತೆಯು ಪುನಃ ಚಿಗುರಿತು. ವಿದ್ಯಾ ಸಂಜೀವನರಾದ ರಾಯರು ಸಜ್ಜನರಿಗೆ ಈ ರೀತಿ ಜ್ಞಾನೋಪದೇಶ ಮಾಡಿ ಅವರನ್ನು ಉತ್ತಮ ಜ್ಞಾನಿಗಳನ್ನಾಗಿ ಮಾಡಿದರು, ಹೀಗೆ ಅನುಗ್ರಹಿಸಿದರು. (ಇಂತಹ ಮಹಾಮಹಿಮರಾದ ಗುರುಗಳ ವಿಷಯದಲ್ಲಿ ನನ್ನ ಮನಸ್ಸು ರಮಿಸುತ್ತದೆ.)

**ವಿಗ್ರಹ —**

**ಕಲಿಕಾಲಕಲಾಲೂನಮೂಲಜಾಲಕಲಾಲತಾ —** ಕಲೇಃ ಕಾಲಃ ಕಲಿಕಾಲಃ, ಕಲಿಕಾಲಸ್ಯ ಕಲಾ ಕಲಿಕಾಲಕಲಾ, ಕಲಿಕಾಲಕಲಯಾ ಲೂನಂ ಕಲಿಕಾಲಕಲಾಲೂನಂ, ಮೂಲಾನಾಂ ಜಾಲಂ ಮೂಲಜಾಲಂ, ಕಲಿಕಾಲಕಲಾಲೂನಂ ಮೂಲಜಾಲಂ ಯಸ್ಯಾಃ ಸಾ ಕಲಿಕಾಲಕಲಾಲೂನ-ಮೂಲಜಾಲಾ, ಕಲೈವ ಲತಾ ಕಲಾಲತಾ, ಕಲಿಕಾಲಕಲಾಲೂನಮೂಲಜಾಲಾ ಚ ಸಾ ಕಲಾಲತಾ ಚ ಕಲಿಕಾಲಕಲಾಲೂನಮೂಲಜಾಲಕಲಾಲತಾ ।

**ಯದ್ವಾಗಮೃತಸೇಕೇನ —** ಯಸ್ಯ ವಾಕ್ ಯದ್ವಾಕ್, ಯದ್ವಾಗ್ ಏವ ಅಮೃತಂ ಯದ್ವಾಗಮೃತಂ, ಯದ್ವಾಗಮೃತಸ್ಯ ಸೇಕಃ ಯದ್ವಾಗಮೃತಸೇಕಃ, ತೇನ ।

**ಸಂಜಾತಪಲ್ಲವಾ —** ಸಮ್ಯಕ್ ಜಾತಾಃ ಸಂಜಾತಾಃ, ಸಂಜಾತಾಃ ಪಲ್ಲವಃ ಯಸ್ಯಾಃ ಸಾ ಸಂಜಾತ-ಪಲ್ಲವಾ ।

**ಅಲಂಕಾರ —** ಇಲ್ಲಿ ಕಲಾ ಏವ ಲತಾ, ವಿದ್ಯೆಯೆಂಬ ಬಳ್ಳಿ, ವಾಕ್ ಏವ ಅಮೃತಂ, ಮಾತೆಂಬ ಅಮೃತ, ಎಂದು ವಿಷಯ-ವಿಷಯಿಗಳಿಗೆ ಅಭೇದವನ್ನು ವರ್ಣಿಸಿದ್ದರಿಂದ ರೂಪಕಾಲಂಕಾರ. 'ವಿಷಯ್ಯಭೇದತಾದ್ರೂಪ್ಯ-ರಂಜನಂ ವಿಷಯಸ್ಯ ಯತ್ ರೂಪಕಂ' ಎಂದು ರೂಪಕಾಲಂಕಾರದ ಲಕ್ಷಣ.

★ ★ ★

**ಅವತಾರಿಕಾ —** ಹೀಗೆ ಶ್ರೀರಾಘವೇಂದ್ರರ ಗ್ರಂಥರಚನಾ ಸಾಮರ್ಥ್ಯವನ್ನು ಪ್ರಶಂಸಿಸಿ, ಈಗ ಅವರ ವಾಕ್ಯಾರ್ಥಸಾಮರ್ಥ್ಯವನ್ನು ಮುಂದಿನ ಪದ್ಯದಿಂದ ವರ್ಣಿಸುತ್ತಾರೆ —

**ಲಲಾಟರೇಖಾದಂಭೇನ ಬಿರುದಾಕ್ಷರಶಾಲಿನಃ ।**
**ಜಯಸ್ತಂಭಾಯಿತಾ ಯಸ್ಯ ಪ್ರತಿಧೀರಾಃ ಪರಾಜಿತಾಃ (ಪಲಾಯಿತಾಃ) ॥ 32 ॥**

**ಪದಚ್ಛೇದ —** ಲಲಾಟರೇಖಾದಂಭೇನ, ಬಿರುದಾಕ್ಷರಶಾಲಿನಃ, ಜಯಸ್ತಂಭಾಯಿತಾಃ, ಯಸ್ಯ, ಪ್ರತಿಧೀರಾಃ, ಪರಾಜಿತಾಃ (ಪಲಾಯಿತಾಃ) ।

**ಅನ್ವಯ —** ಪಲಾಯಿತಾಃ (ಪರಾಜಿತಾಃ) ಯಸ್ಯ ಪ್ರತಿಧೀರಾಃ ಲಲಾಟರೇಖಾದಂಭೇನ ಬಿರುದಾಕ್ಷರ-ಶಾಲಿನಃ ಜಯಸ್ತಂಭಾಯಿತಾಃ (ಅಭೂವನ್) ।

**ಅನ್ವಯಾರ್ಥ —**

**ಪಲಾಯಿತಾಃ** = ವಾದದಲ್ಲಿ ಸೋತು ಓಡಿಹೋದ

(**ಪರಾಜಿತಾಃ** = ಶ್ರೀರಾಯರಿಂದ ವಾದದಲ್ಲಿ ಸೋತುಹೋದ)

**ಯಸ್ಯ** = ಯಾವ ಶ್ರೀರಾಘವೇಂದ್ರಗುರುಸಾರ್ವಭೌಮರ

**ಪ್ರತಿಧೀರಾಃ** = ಪ್ರತಿವಾದಿವಿದ್ವಾಂಸರು

**ಲಲಾಟರೇಖಾದಂಭೇನ** = ಹಣೆಗಳಲ್ಲಿರುವ ನೆರಿಗೆಯ ರೂಪವಾದ ರೇಖೆಗಳ ನೆಪದಿಂದ,

**ಬಿರುದಾಕ್ಷರಶಾಲಿನಃ** = 'ಈ ಗುರುಗಳು ನಮ್ಮನ್ನು ಜಯಿಸಿದ್ದಾರೆ ನಾವು ಅವರಿಂದ ಸೋತಿದ್ದೇವೆ' ಎಂಬ ಬಿರುದಿನ ಅಕ್ಷರಗಳಿಂದ ಶೋಭಿಸುವವರಾಗಿ

**ಜಯಸ್ತಂಭಾಯಿತಾಃ** = ಬಿರುದಿನ ಅಕ್ಷರಗಳನ್ನು ಕೆತ್ತಿದ, (ಅಥವಾ ಜಯಪತ್ರಿಕೆಯನ್ನು ಅಂಟಿಸಿದ) ಕಂಭಗಳಂತೆ (ಆದರು.)

**ತಾತ್ಪರ್ಯ** — ಶ್ರೀಗುರುರಾಜರೊಡನೆ ವಾದ ಮಾಡಲು ಬಂದ ವಿದ್ವಾಂಸರು ಅವರ ವಾಗ್ವೈಖರಿಯಿಂದ ಪರಾಜಿತರಾದರು. (ಪಲಾಯನಗೈದರು.) ಪರಾಜಿತರಾದ ಅವರ ಹಣೆಯಲ್ಲಿ 'ಅಬ್ಬಾ ಇವರ ವಾಗ್ವೈಭವದ ಎದುರು ನಾವು ಎಷ್ಟರವರು' ಇತ್ಯಾದಿ ಆಶ್ಚರ್ಯಕರ ಭಾವನೆಯಿಂದ ನಾನಾವಿಧವಾದ ರೇಖೆಗಳು ಮೂಡಿ ಬಂದವು. ಅದನ್ನು ನೋಡಿದರೆ 'ಈ ಗುರುವರ್ಯರು ನಮ್ಮನ್ನು ಸೋಲಿಸಿದರು, ನಾವು ಇವರಿಂದ ಸೋತೆವು,' ಇವರು ವಾಗ್ಮಿವರ್ಯರು ಎಂಬ ಪರಾಜಯದ ಅಕ್ಷರಗಳು ಮತ್ತು ರಾಯರ ಜಯಪತ್ರಿಕೆಯ ಅಕ್ಷರಗಳು ಅವರ ಹಣೆಯಲ್ಲಿ ಕಾಣಿಸುವಂತೆ ಇದ್ದವು. ಇಂತಹ ಜಯಪತ್ರಿಕಾಕ್ಷರಗಳನ್ನು ಹೊತ್ತು ಪ್ರತಿವಾದಿಗಳು ಅಷ್ಟದಿಕ್ಕುಗಳಿಗೂ ಓಡಿಹೋಗಿ ನಿಂತಾಗ ಅಲ್ಲೆಲ್ಲಾ ಶ್ರೀರಾಯರ ಜಯಸ್ತಂಭಗಳನ್ನು ನಿಲ್ಲಿಸಿದಂತಾಯಿತು ಎಂದು ಭಾವ.

**ಕೋಶ** — 'ಧೀರೋ ಮನೀಷೀ ಜ್ಞಃ ಪ್ರಾಜ್ಞಃ ಸಂಖ್ಯಾವಾನ್ ಪಂಡಿತಃ ಕವಿಃ' ಅಮರ. ಪ್ರತಿಧೀರ ಎಂದರೆ ಪ್ರತಿಪಂಡಿತ – ಪ್ರತಿವಾದಿ ಎಂದು ಅರ್ಥ.

**ವಿಗ್ರಹ** —

**ಲಲಾಟರೇಖಾದಂಭೇನ** — ಲಲಾಟೇ ರೇಖಾಃ ಲಲಾಟರೇಖಾಃ, ಲಲಾಟರೇಖಾನಾಂ ದಂಭಃ ಲಲಾಟರೇಖಾದಂಭಃ, ತೇನ ।

**ಬಿರುದಾಕ್ಷರಶಾಲಿನಃ** — ಬಿರುದಸ್ಯ ಅಕ್ಷರಾಣಿ ಬಿರುದಾಕ್ಷರಾಣಿ, ಬಿರುದಾಕ್ಷರೈಃ ಶಾಲ್ಯಂತೆ (ಶೋಭಂತೇ) ಇತಿ ಬಿರುದಾಕ್ಷರಶಾಲಿನಃ ।

**ಜಯಸ್ತಂಭಾಯಿತಾಃ** — ಜಯಸ್ತಂಭಾ ಇವ ಆಚರಿತಾಃ ಜಯಸ್ತಂಭಾಯಿತಾಃ ।

**ವ್ಯಾಕರಣವಿಶೇಷ** — ಜಯಸ್ತಂಭವತ್ ಆಚರಿತಾಃ ಜಯಸ್ತಂಭಾಯಿತಾಃ, ಕರ್ತುಃ ಕ್ಯಙ್ ಸಲೋಪಶ್ಚ (3-1-11) ಎಂಬ ಸೂತ್ರದಿಂದ ಕ್ಯಙ್ ಪ್ರತ್ಯಯ, ಅದರ ಮೇಲೆ 'ಕ್ತ' ಪ್ರತ್ಯಯ ಬಂದಿದೆ.

**ಅಲಂಕಾರ** — ಇಲ್ಲಿ ಜಯಸ್ತಂಭವು ಉಪಮಾನ, ಪ್ರತಿಧೀರರು ಉಪಮೇಯ ಬಿರುದಾಕ್ಷರಶಾಲಿತ್ವ ಸಾಧಾರಣಧರ್ಮ, ಜಯಸ್ತಂಭಾ ಇವ ಆಚರಿತಾಃ ಎಂಬ ವಿಗ್ರಹದಲ್ಲಿದ್ದ ಇವ ಶಬ್ದವು ಸಮಾಸದಲ್ಲಿ ಲುಪ್ತ-ವಾದುದರಿಂದ ವಾಚಕಲುಪ್ತೋಪಮಾಲಂಕಾರ. ಲಲಾಟರೇಖಾದಂಭೇನ ಎಂಬಲ್ಲಿ ಕೈತವಾಪಹ್ನುತಿ ಅಲಂಕಾರ. 'ಕೈತವಾಪಹ್ನುತಿರ್ವ್ಯಕ್ತೌ ವ್ಯಾಜಾದ್ಯೈಃ ನಿಹ್ನುತೇಃ ಪದೈಃ' ಎಂದು ಅದರ ಲಕ್ಷಣ. 'ಕೈತವಾಪಹ್ನುತಿರ್ವ್ಯಾಜಾದಿ-ಪದೋಕ್ತಾರ್ಥನಿಹ್ನವಃ । 'ಜಯೀಂದ್ರಕೀರ್ತಿವ್ಯಾಜೇನ ಜ್ಯೋತ್ಸ್ನಾ ಜಾಗರ್ತ್ಯಹರ್ನಿಶಮ್' ಎಂದು ಶ್ರೀಸುಧೀಂದ್ರ-ತೀರ್ಥವಿರಚಿತ ಅಲಂಕಾರಮಂಜರಿಯಲ್ಲಿ ಕೈತವಾಪಹ್ನುತಿಯ ಲಕ್ಷಣ, ಲಕ್ಷ್ಯಗಳು ಉಕ್ತವಾಗಿವೆ.

ಇಲ್ಲಿ ಕೈತವಾಪಹ್ನುತಿ ಅನುಪ್ರಾಣಿತ ವಾಚಕಲುಪ್ತೋಪಮಾ ಅಲಂಕಾರ.

**ಅವತಾರಿಕಾ** — 'ಕಲಿಕಾಲಕಲಾಲೂನ' ಎಂಬ 31ನೆಯ ಪದ್ಯದಲ್ಲಿ ಗುರುರಾಜರ 'ವಾಕ್' ಎಂಬುದು ಅಮೃತವೆಂದು ಹೇಳಿದ್ದಾರೆ. ಅಮೃತವನ್ನು ಸೇವಿಸಿದವರು ನಿತ್ಯರಾಗುತ್ತಾರೆ. ನಮ್ಮ ಪಂಚೇಂದ್ರಿಯಗಳಲ್ಲಿ ಶ್ರವಣೇಂದ್ರಿಯವು ಮಾತ್ರ ನಿತ್ಯ. ಉಳಿದ ಇಂದ್ರಿಯಗಳು ಅನಿತ್ಯ ಎಂದು ನೈಯಾಯಿಕರು ಹೇಳುತ್ತಾರೆ. ಉಳಿದ ಇಂದ್ರಿಯಗಳಿಗೆ ಇಲ್ಲದ ಇದ್ದಂತಹ ಅಮೃತತ್ವ ಎಂದರೆ ನಿತ್ಯತ್ವವು ಗುರುರಾಜರ ಮಾತಿಗೆ ಅಮೃತತ್ವವಿದ್ದರೇ ಕೊಡುತ್ತದೆ ಎಂದು ಇಲ್ಲಿ ಅನ್ಯಥಾನುಪಪತ್ತಿಯಿಂದ ವರ್ಣಿಸುತ್ತಾರೆ.

**ಶ್ರೋತೃಣಾಂ ಶ್ರವಣಾನ್ಯಾಸನ್ ಯದ್ವಾಗಮೃತಸೇವಯಾ ।**
**ನಿತ್ಯಾನಿ ತದಯೋಗ್ಯತ್ವಾನ್ನ ತಥಾ ಹೀಂದ್ರಿಯಾಂತರಮ್ ॥ 33 ॥**

**ಪದಚ್ಛೇದ** — ಶ್ರೋತೃಣಾಂ, ಶ್ರವಣಾನಿ, ಆಸನ್, ಯದ್ವಾಗಮೃತಸೇವಯಾ, ನಿತ್ಯಾನಿ, ತದಯೋಗ್ಯತ್ವಾತ್, ನ, ತಥಾ, ಹಿ, ಇಂದ್ರಿಯಾಂತರಮ್ ।

**ಅನ್ವಯ** — ಯದ್ವಾಗಮೃತಸೇವಯಾ ಶೋತೃಣಾಂ ಶ್ರವಣಾನಿ ನಿತ್ಯಾನಿ ಆಸನ್, ಇಂದ್ರಿಯಾಂತರಂ ತದಯೋಗ್ಯತ್ವಾತ್ ತಥಾ (ನಿತ್ಯಂ) ನ ಹಿ ।

**ಅನ್ವಯಾರ್ಥ** —

**ಯದ್ವಾಗಮೃತಸೇವಯಾ** — **ಯತ್** = ಯಾವ ರಾಘವೇಂದ್ರಗುರುವರ್ಯರ, **ವಾಗಮೃತ** = (ಗ್ರಂಥರೂಪದ) ಮಾತೆಂಬ ಅಮೃತದ, **ಸೇವಯಾ** = ನಿತ್ಯ ಶ್ರವಣದಿಂದ (ಕೇಳುವುದರಿಂದ)

**ಶ್ರೋತೃಣಾಂ** = ಕೇಳುವವರ

**ಶ್ರವಣಾನಿ** = ಶ್ರವಣೇಂದ್ರಿಯಗಳು (ಕಿವಿಗಳು)

**ನಿತ್ಯಾನಿ** = ನಾಶವಿಲ್ಲದವುಗಳಾಗಿ

**ಆಸನ್** = ಆದವು

**ಇಂದ್ರಿಯಾಂತರಂ** = ಕಿವಿಗಿಂತ ಬೇರೆಯಾದ ಕಣ್ಣು ಮುಂತಾದ ಇಂದ್ರಿಯಗಳು

**ತದಯೋಗ್ಯತ್ವಾತ್** = ವಾಗಮೃತ ಸೇವೆಯನ್ನು (ಶ್ರವಣವನ್ನು) ಮಾಡಲು ಯೋಗ್ಯತೆ ಇಲ್ಲದ್ದರಿಂದ

**ತಥಾ** = ನಿತ್ಯಗಳಾಗಿ

**ನ** (ಆಸನ್) = ಆಗಲಿಲ್ಲ.

**ಹಿ** = ಪ್ರಸಿದ್ಧವು.

**ತಾತ್ಪರ್ಯ** — ನೈಯಾಯಿಕ ರೀತಿಯಿಂದ ಚಕ್ಷುಸ್, ಘ್ರಾಣ, ರಸನಾ, ತ್ವಕ್, ಶ್ರವಣ (ಕಣ್ಣು, ಮೂಗು, ನಾಲಿಗೆ, ತ್ವಚೆ, ಕಿವಿ) ಎಂಬ ಜ್ಞಾನಜನಕಗಳಾದ ಪಂಚೇಂದ್ರಿಯಗಳಿಲ್ಲಿ ಕಣ್ಣು ಮುಂತಾದ ಇಂದ್ರಿಯಗಳು ತೇಜಸ್ಸು, ಪೃಥಿವೀ, ಜಲ, ವಾಯು ಎಂಬ ಭೂತಗಳಿಂದ ಉತ್ಪನ್ನವಾದುದರಿಂದ ಅನಿತ್ಯಗಳು. ಶ್ರವಣೇಂದ್ರಿಯವು ಆಕಾಶರೂಪವಾದುದರಿಂದ ನಿತ್ಯವು. ಈ ನಿತ್ಯತ್ವವು ಸ್ವತಸ್ಸಿದ್ಧವಾಗಿದ್ದರೂ ಅದು ಶ್ರೀರಾಘವೇಂದ್ರಗುರುಸಾರ್ವಭೌಮರ (ಗ್ರಂಥ)ವಾಗಮೃತಸೇವನೆಯಿಂದ ಉಂಟಾದುದು. ಅಮೃತಸೇವನೆಯಿಂದ ಜರಾಮರಣಗಳು ಉಂಟಾಗುವುದಿಲ್ಲವೆಂದು ಪ್ರಸಿದ್ಧಿ ಇದೆ ಎಂಬ ಅಭಿಪ್ರಾಯವನ್ನು ಇಲ್ಲಿ ವ್ಯಕ್ತಪಡಿಸಿದ್ದಾರೆ. ಕಣ್ಣು, ಮೂಗು ಮೊದಲಾದ ಇತರ ಇಂದ್ರಿಯಗಳಿಗೆ ಶ್ರವಣ ಮಾಡುವ ಯೋಗ್ಯತೆ ಇಲ್ಲದ್ದರಿಂದ ಅವು ಅನಿತ್ಯವಾಗಿಯೇ ಉಳಿದವು. ಗುರುರಾಜರ

ಪರಿಮಳಯುಕ್ತವಾದ ವಾಕ್‌ಸುಧಾಸೇವನೆಯಿಂದ ಶ್ರಾವಕರ ಶ್ರವಣಗಳು ನಿತ್ಯಗಳಾದವು. ಇಲ್ಲದಿದ್ದರೆ ಶ್ರವಣೇಂ-ದ್ರಿಯಗಳಿಗೆ ಮಾತ್ರ ನಿತ್ಯತ್ವವು ಹೇಗೆ ಬರಲು ಸಾಧ್ಯ ? ಆದ್ದರಿಂದ ಶ್ರವಣವು ನಿತ್ಯವಾದುದರಿಂದ ಗುರುರಾಜರ ಮಾತು ಅಮೃತವೆಂದು ಸಿದ್ಧಿಸುತ್ತದೆ ಎಂದು ಭಾವ.

**ವಿಗ್ರಹ —**

**ಯದ್ವಾಗಮೃತಸೇವಯಾ —** ಯಸ್ಯ ವಾಕ್ ಯದ್ವಾಕ್, ಯದ್ವಾಗೇನ ಅಮೃತಂ ಯದ್ವಾಗಮೃತಂ, ಯದ್ವಾಗಮೃತಸ್ಯ ಸೇವಾ ಯದ್ವಾಗಮೃತಸೇವಾ, ತಯಾ ।

**ತದಯೋಗ್ಯತ್ವಾತ್ —** ನ ಯೋಗ್ಯಂ ಅಯೋಗ್ಯಂ, ತಸ್ಯಾಃ (ಯದ್ವಾಗಮೃತಸೇವಾಯಾಃ) ಅಯೋಗ್ಯಂ ತದಯೋಗ್ಯಂ, ತದಯೋಗ್ಯಸ್ಯ ಭಾವಃ ತದಯೋಗ್ಯತ್ವಂ, ತಸ್ಮಾತ್ ।

**ಇಂದ್ರಿಯಾಂತರಂ —** ಅನ್ಯತ್ ಇಂದ್ರಿಯಂ ಇಂದ್ರಿಯಾಂತರಮ್ ।

**ಕ್ರಿಯಾಪದ —** ಆಸನ್ - 'ಅಸ ಭುವಿ' ಇತಿ ಸತ್ತಾರ್ಥಕಾತ್ ಅಸ್‌ಧಾತೋಃ ಅಕರ್ಮಕಾತ್ ಪರಸ್ಮೈಪದಿನಃ ಅನದ್ಯತನಭೂತೇ ಲಙ್ ಪ್ರಥಮಪುರುಷೇ ಬಹುವಚನೇ ಆಸನ್ ಇತಿ ರೂಪಮ್ ।

| | | |
|---|---|---|
| ಆಸೀತ್ | ಆಸ್ತಾಂ | ಆಸನ್ । |
| ಆಸೀಃ | ಆಸ್ತಂ | ಆಸ್ತ । |
| ಆಸಂ | ಆಸ್ವ | ಆಸ್ಮ । |

**ಪ್ರಯೋಗ —** ಶ್ರೋತೃಣಾಂ ಶ್ರವಣಾನಿ ನಿತ್ಯಾನಿ ಆಸನ್ । (ಅಕರ್ಮಕ ಕರ್ತರಿ).
ಶ್ರೋತೃಣಾಂ ಶ್ರವಣೈಃ ನಿತ್ಯೈಃ ಅಭೂಯತ । (ಭಾವೇ).

**ಅಲಂಕಾರ —** ಶ್ರವಣೇಂದ್ರಿಯದಲ್ಲಿ ನಿತ್ಯತ್ವವು ಸ್ವತಃಸಿದ್ಧವಾಗಿದೆ. ಆ ನಿತ್ಯತ್ವಕ್ಕೆ ಶ್ರೀರಾಯರ ವಾಗಮೃತ-ಸೇವೆಯು ಹೇತುವಲ್ಲದಿದ್ದರೂ ಅದನ್ನು ಹೇತುವಾಗಿ ಉತ್ಪ್ರೇಕ್ಷಿಸಿದ್ದಾರೆ. ಇವ, ನೂನಂ ಇತ್ಯಾದಿ ಉತ್ಪ್ರೇಕ್ಷಾವ್ಯಂಜಕ ಶಬ್ದವನ್ನು ಹೇಳಿಲ್ಲ. ಆದ್ದರಿಂದ ವ್ಯಂಗ್ಯವಾದ ಹೇತೂತ್ಪ್ರೇಕ್ಷಾಲಂಕಾರ.



**ಅವತಾರಿಕಾ —** ಶ್ರೀರಾಘವೇಂದ್ರಗುರುರಾಜರು ವಾದಿಗಳೊಡನೆ ವಾದಪ್ರಸಂಗವನ್ನು (ವಾದವನ್ನು) ಮಾಡಿ ಬಹಳ ಯಶಸ್ಸುಗಳಿಸಿದರು ಎಂದು ಹೇಳುತ್ತಾರೆ —

**ಪ್ರತೀಪವಿದ್ವತ್ಪಾಥೋಧಿಮಥನೋತ್ಸವಚುಂಚುನಾ ।**
**ವಾದಮಂದರಶೈಲೇನ ಯೇನಾವಾಪಿ ಯಶೋಽಮೃತಮ್ ॥ 34 ॥**

**ಪದಚ್ಛೇದ —** ಪ್ರತೀಪವಿದ್ವತ್ಪಾಥೋಧಿಮಥನೋತ್ಸವಚುಂಚುನಾ ವಾದಮಂದರಶೈಲೇನ ಯೇನ ಅವಾಪಿ ಯಶೋಽಮೃತಮ್ ।

**ಅನ್ವಯ —** ಪ್ರತೀಪವಿದ್ವತ್ಪಾಥೋಧಿಮಥನೋತ್ಸವಚುಂಚುನಾ ಯೇನ ವಾದಮಂದರಶೈಲೇನ ಯಶೋ-ಽಮೃತಂ ಅವಾಪಿ ।

**ಅನ್ವಯಾರ್ಥ —**

**ಪ್ರತೀಪವಿದ್ವತ್ಪಾಥೋಧಿಮಥನೋತ್ಸವಚುಂಚುನಾ — ಪ್ರತೀಪವಿದ್ವತ್** = ಪ್ರತಿವಾದಿ ವಿದ್ವಾಸರೆಂಬ, **ಪಾಥೋಧಿ** = ಸಮುದ್ರದ, **ಮಥನ** = ಕಡೆಯುವುದೆಂಬ ಉತ್ಸವ, **ಉತ್ಸವಚುಂಚುನಾ** = ಸಂತೋಷ ಸಮಾರಂಭದಿಂದ ಪ್ರಸಿದ್ಧರಾದ

**ಯೇನ** = ಯಾವ ಶ್ರೀರಾಘವೇಂದ್ರ ಗುರುಸಾರ್ವಭೌಮರಿಂದ

**ವಾದಮಂದರಶೈಲೇನ** = ವಾದ ಪ್ರಸಂಗವೆಂಬ ಮಂದರ ಪರ್ವತದಿಂದ

**ಯಶೋಽಮೃತಂ** = ಕೀರ್ತಿಯೆಂಬ ಅಮೃತವು

**ಅವಾಪಿ** = ಹೊಂದಲ್ಪಟ್ಟಿತು.

**ತಾತ್ಪರ್ಯ—** ಶ್ರೀರಾಘವೇಂದ್ರ ಗುರುಸಾರ್ವಭೌಮರ ಪ್ರತಿವಾದಿಗಳಾದ ವಿದ್ವಾಂಸರು ಸಮುದ್ರ-ರೂಪರು. ಅವರ ಜೊತೆಗೆ ವಾದಕ್ಕಿಳಿದು ಸಮುದ್ರವನ್ನು ದೇವಾಸುರರು ಮಥಿಸಿದಂತೆ ಶ್ರೀಗುರುರಾಜರು ವಾದಿಗಳನ್ನು ತಮ್ಮ ವಾದವೆಂಬ ಮಂದರ ಪರ್ವತದಿಂದ ಮಥಿಸಿದರು. ಸಮುದ್ರದಿಂದ ಅಮೃತ ಹುಟ್ಟಿತು. ಇಲ್ಲಿ ಶ್ರೀರಾಯರು ವಾದ ಪ್ರಸಂಗದಿಂದ ಕೀರ್ತಿಯನ್ನು ಪಡೆದರು ಎಂದು ಭಾವ.

**ವಿಗ್ರಹ—**

**ಪ್ರತೀಪವಿದ್ವತ್ಪಾಥೋಧಿಮಥನೋತ್ಸವಚುಂಚುನಾ —** ಪ್ರತೀಪಾಶ್ಚ ತೇ ವಿದ್ವಾಂಸಶ್ಚ ಪ್ರತೀಪ-ವಿದ್ವಾಂಸಃ, ಪಾಂಥಾಸಿ ಅಸ್ಮಿನ್ ಧೀಯಂತೇ ಇತಿ ಪಾಥೋಧಿಃ, ಪ್ರತೀಪವಿದ್ವಾಂಸಃ ಏವ ಪಾಥೋಧಿಃ ಪ್ರತೀಪವಿದ್ವತ್ಪಾಥೋಧಿಃ, ಪ್ರತೀಪವಿದ್ವತ್ಪಾಥೋಧೇಃ ಮಥನಂ ಪ್ರತೀಪವಿದ್ವ-ತ್ಪಾಥೋಧಿಮಥನಂ, ಪ್ರತೀಪವಿದ್ವತ್ಪಾಥೋಧಿಮಥನಮೇವ ಉತ್ಸವಃ ಪ್ರತೀವಿದ್ವ-ತ್ಪಾಥೋಧಿಮಥನೋತ್ಸವಃ, ಪ್ರತೀಪವಿದ್ವತ್ಪಾಥೋಧಿಮಥನೋತ್ಸವೇನ ವಿತ್ತಃ ಪ್ರತೀಪವಿದ್ವ-ತ್ಪಾಥೋಧಿಮಥನೋತ್ಸವಚುಂಚುಃ, ತೇನ ।

**ವಾದಮಂದರಶೈಲೇನ —** ಮಂದರ ಇತಿ ಶೈಲಃ ಮಂದರಶೈಲಃ, ವಾದ ಏವ ಮಂದರಶೈಲಃ ವಾದ-ಮಂದರಶೈಲಃ, ತೇನ ।

**ಯಶೋಽಮೃತಂ —** ಯಶಃ ಏವ ಅಮೃತಮ್ ।

**ಕ್ರಿಯಾಪದ —** ಅವಾಪಿ - ಅವ ಉಪಸರ್ಗಪೂರ್ವಕಾತ್ ಆಪ್ಲೃ ವ್ಯಾಪ್ತೌ ಇತ್ಯಸ್ಮಾದ್ ಧಾತೋಃ ಸಕರ್ಮಕಾತ್ ಕರ್ಮಣಿ ಆತ್ಮನೇಪದಿನಃ ಭೂತೇ ಲುಜ್ ಪ್ರಥಮಪುರುಷೇ ಏಕವಚನೇ ಅವಾಪಿ ಇತಿ ರೂಪಮ್ ।

| | | |
|---|---|---|
| ಅವಾಪಿ | ಅವಾಪಿಷಾತಾಂ | ಅವಾಪಿಷತ । |
| ಅವಾಪಿಷ್ಠಾಃ | ಅವಾಪಿಷಾಥಾಂ | ಅವಾಪಿಢ್ವಮ್ । |
| ಅವಾಪಿಷಿ | ಅವಾಪಿಷ್ವಹಿ | ಅವಾಪಿಷ್ಮಹಿ । |

**ಪ್ರಯೋಗ —** ಪ್ರತೀಪವಿದ್ವತ್ಪಾಥೋಧಿಮಥನೋತ್ಸವಚುಂಚುನಾ ಯೇನ ಯಶೋಽಮೃತಂ ಅವಾಪಿ । (ಕರ್ಮಣಿ).

ಪ್ರತೀಪಫಿದ್ವತ್ಪಾಥೋಧಿಮಥನೋತ್ಸವಚುಂಚುಃ ಯಃ ಯಶೋಽಮೃತಂ ಅವಾಪತ್ । (ಕರ್ತರಿ).

**ಅಲಂಕಾರ** — ಇಲ್ಲಿ ಪ್ರತಿವಾದಿ ವಿದ್ವಾಂಸರೇ ಸಮುದ್ರ. ಅದರ ಮಥನವೇ ಉತ್ಸವ, ವಾದ-ಮಂದರವೇ ಶೈಲ, ಯಶಸ್ಸೇ ಅಮೃತ ಎಂದು ವಿಷಯ ವಿಷಯಿಗಳಿಗೆ ಅಭೇದವನ್ನು ವರ್ಣಿಸಿದ್ದರಿಂದ ರೂಪಕಾಲಂಕಾರವಿದೆ.

**ಕೋಶ** — ಪೀಯೂಷಮಮೃತಂ ಸುಧಾ ।



**ಅವತಾರಿಕಾ** — ಶ್ರೀರಾಯರ ಕೀರ್ತಿಯು ಬ್ರಹ್ಮಾಂಡದ ಒಳಗೂ ಹೊರಗೂ ವ್ಯಾಪಿಸಿದೆ ಎಂದು ವರ್ಣಿಸಿದ್ದಾರೆ.

**ಹಿರಣ್ಯಗರ್ಭಮೂರ್ತಿಸ್ಥ ಪುರುಷಸ್ಯೇವ ಯದ್ಯಶಃ ।**
**ತತೋ ಬಹಿಃ ಪ್ರಸೃಮರಂ ರಾಜತೇ ರೌಪ್ಯಸಂಪುಟಮ್ ॥ 35 ॥**

**ಪದಚ್ಛೇದ**— ಹಿರಣ್ಯಗರ್ಭಮೂರ್ತಿಸ್ಥಪುರುಷಸ್ಯ, ಇವ, ಯದ್, ಯಶಃ, ತತಃ, ಬಹಿಃ, ಪ್ರಸೃಮರಂ ರಾಜತೇ, ರೌಪ್ಯಸಂಪುಟಮ್ ।

**ಅನ್ವಯ**— ಯದ್ ಯಶಃ ಹಿರಣ್ಯಗರ್ಭಮೂರ್ತಿಸ್ಥಪುರುಷಸ್ಯ ತತಃ ಬಹಿಃ ಪ್ರಸೃಮರಂ ರೌಪ್ಯಸಂಪುಟಂ ಇವ ರಾಜತೇ ।

**ಅನ್ವಯಾರ್ಥ**—

**ಯದ್ಯಶಃ** = ಯಾವ ಶ್ರೀರಾಘವೇಂದ್ರ ಗುರುಗಳ ಕೀರ್ತಿಯು

**ಹಿರಣ್ಯಗರ್ಭಮೂರ್ತಿಸ್ಥಪುರುಷಸ್ಯ** — **ಹಿರಣ್ಯಗರ್ಭ** = ಬ್ರಹ್ಮನ, **ಮೂರ್ತಿ** = ಬ್ರಹ್ಮಾಂಡ ರೂಪ-ವಾದ ಶರೀರದಲ್ಲಿ, **ಸ್ಥ** = ಇರುವ, **ಪುರುಷಸ್ಯ** = ಸಮಸ್ತ ಜೀವಶರೀರಗಳಲ್ಲಿ ವಾಸಿಸುತ್ತಿರುವ ಶ್ರೀಮನ್ನಾರಾಯಣನ

**ತತಃ** = ಆ ಬ್ರಹ್ಮಾಂಡದ ದೆಸೆಯಿಂದ

**ಬಹಿಃ** = ಹೊರಗೆ

**ಪ್ರಸೃಮರಂ (ಸತ್)** = ಹರಡುವ ಸ್ವಭಾವ ಉಳ್ಳದ್ದಾಗಿ

**ರೌಪ್ಯಸಂಪುಟಂ ಇವ** = ಬೆಳ್ಳಿಯ ಸಂಪುಟದಂತೆ (ಕರಂಡಕದಂತೆ)

**ರಾಜತೇ** = ಶೋಭಿಸುತ್ತಿದೆ.

**ಅಥವಾ** —

**ಹಿರಣ್ಯಪುರುಷಸ್ಯ** = ಶಾಲಗ್ರಾಮ ಶಿಲೆಯಲ್ಲಿರುವ ಪರಮ ಪುರುಷನಾದ ಹರಿಯ

**ತತಃ** = ಆ ಶಾಲಗ್ರಾಮ ಶಿಲೆಯಿಂದ

**ಬಹಿಃ** = ಹೊರಗಡೆ

**ಪ್ರಸೃಮರಂ** = ವಿಸ್ತಾರವಾಗಿರುವ

**ರೌಪ್ಯಸಂಪುಟಂ ಇವ** = ಬೆಳ್ಳಿಯ ಸಂಪುಟದಂತೆ

**ಯದ್ಯಶಃ** = ಯಾವ ಗುರುಗಳ ಕೀರ್ತಿಯು

**ರಾಜತೇ** = ಪ್ರಕಾಶಿಸುತ್ತಿದೆ.

**ತಾತ್ಪರ್ಯ**— ಚತುರ್ಮುಖ ಬ್ರಹ್ಮನಿಗೆ ಬ್ರಹ್ಮಾಂಡವೇ ಶರೀರವು. 'ಪಾತಾಲಮೇತಸ್ಯ ಹಿ ಪಾದಮೂಲಂ' ಇತ್ಯಾದಿಯಾಗಿ ಭಾಗವತದಲ್ಲಿ ಹೇಳಿದಂತೆ ವಿರಾಡ್ ರೂಪನಾದ ಹರಿಯು ಅಂತಹ ಬ್ರಹ್ಮಾಂಡದಲ್ಲಿ ವ್ಯಾಪ್ತ-ನಾಗಿರುತ್ತಾನೆ. ಶ್ರೀರಾಘವೇಂದ್ರಗುರುಗಳ ರಜತಧವಳ ಕೀರ್ತಿಯು ಬ್ರಹ್ಮಾಂಡದ ಹೊರಗೂ ಹರಡಿದ್ದು, ವಿರಾಡ್ರೂಪಿಯಾದ ಪರಮಾತ್ಮನನ್ನು ಒಳಗೊಂಡ ಒಂದು ಬೆಳ್ಳಿಯ ಸಂಪುಟದಂತೆ ಶೋಭಿಸುತ್ತದೆ. ಗುರುಗಳ ಕೀರ್ತಿಯು ಬ್ರಹ್ಮಾಂಡದ ಹೊರಗೂ ವ್ಯಾಪ್ತವಾಗಿದೆ ಎಂದು ಭಾವ. ಅಥವಾ ಶಾಲಗ್ರಾಮ ಶಿಲೆಯಲ್ಲಿ ಸನ್ನಿಹಿತನಾದ ಪರಮಾತ್ಮನಿಗೆ ಆ ಶಾಲಿಗ್ರಾಮ ಶಿಲೆಯ ಹೊರಗೆ ಅದಕ್ಕಿಂತಲೂ ದೊಡ್ಡದಾಗಿರುವ ಬೆಳ್ಳಿಯ ಸಂಪುಟದಂತೆ ಬೆಳ್ಳಿಯವರ್ಣದ ಶ್ರೀರಾಘವೇಂದ್ರರ ಕೀರ್ತಿಯು ರಾಜಿಸುತ್ತಿದೆ, ಎಂದು ಭಾವ.

**ವಿಗ್ರಹ**—

**ಹಿರಣ್ಯಗರ್ಭಮೂರ್ತಿಸ್ಥಪುರುಷಸ್ಯ** — ಹಿರಣ್ಯಗರ್ಭಸ್ಯ ಮೂರ್ತಿಃ ಹಿರಣ್ಯಗರ್ಭಮೂರ್ತಿಃ, ಹಿರಣ್ಯಗರ್ಭಮೂರ್ತೌ ತಿಷ್ಠತೀತಿ ಹಿರಣ್ಯಗರ್ಭಮೂರ್ತಿಸ್ಥಃ, ಹಿರಣ್ಯಗರ್ಭಮೂರ್ತಿಸ್ಥಶ್ಚಾಸೌ ಪುರುಷಶ್ಚ ಹಿರಣ್ಯಗರ್ಭಮೂರ್ತಿಸ್ಥಪುರುಷಃ, ತಸ್ಯ ।

**ಯದ್ಯಶಃ** — ಯಸ್ಯ ಯಶಃ ಯದ್ಯಶಃ ।

**ರೌಪ್ಯಸಂಪುಟಮ್** — ರೌಪ್ಯಸ್ಯ ಸಂಪುಟಂ ರೌಪ್ಯಸಂಪುಟಮ್ ।

**ಕ್ರಿಯಾಪದ** — ರಾಜತೇ - ರಾಜೃದೀಪ್ತೌ ಇತಿ ದೀಪ್ತ್ಯರ್ಥಕಾತ್ ರಾಜ್ ಧಾತೋಃ ಅಕರ್ಮಕಾತ್ ಕರ್ತರಿ ಆತ್ಮನೇ- ಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ ರಾಜತೇ ಇತಿ ರೂಪಮ್ ।

| | | |
|---|---|---|
| ರಾಜತೇ, | ರಾಜೇತೇ, | ರಾಜಂತೇ । |
| ರಾಜಸೇ, | ರಾಜೇಥೇ, | ರಾಜಧ್ವೇ । |
| ರಾಜೇ, | ರಾಜಾವಹೇ, | ರಾಜಾಮಹೇ । |

**ಪ್ರಯೋಗ**— ಯದ್ಯಶಃ ರೌಪ್ಯಸಂಪುಟಮಿವ ರಾಜತೇ । (ಅಕರ್ಮಕಾತ್ ಕರ್ತರಿ)

ಯದ್ಯಶಸಾ ರೌಪಸಂಪುಟೇನ ರಾಜ್ಯತೇ । (ಭಾವೇ)

**ಅಲಂಕಾರ** — ಯದ್ಯಶಃ ತತೋ ಬಹಿಃ ಪ್ರಸೃಮರಂ ರೌಪ್ಯಸಂಪುಟಮಿವ ರಾಜತೇ ಎಂದು ಯಶಸ್ ಉಪಮೇಯ, ರೌಪ್ಯಸಂಪುಟ ಉಪಮಾನ, ಬ್ರಹ್ಮಾಂಡ ಮತ್ತು ಶಾಲಗ್ರಾಮ ಶಿಲೆಯ ಹೊರಗೆ ವ್ಯಾಪ್ತತ್ವ ಸಾಧಾರಣಧರ್ಮ, ಇವ ವಾಚಕಶಬ್ದ, ಈ ನಾಲ್ಕೂ ಇರುವುದರಿಂದ ಪೂರ್ಣೋಪಮಾಲಂಕಾರ.

**ಕೋಶ** — 'ಹಿರಣ್ಯಗರ್ಭೋ ಲೋಕೇಶಃ ಸ್ತ್ರಿಯಾಂ ಮೂರ್ತಿಸ್ತನುಸ್ತನೂಃ' ಎಂದು ಅಮರಕೋಶ ಪ್ರಮಾಣ. 'ತತಃ ಕೂಟಸ್ಥಮಸೃಜದ್ ವಿಧಿಂ ಬ್ರಹ್ಮಾಂಡವಿಗ್ರಹಮ್' ಎಂದು ಮಣಿಮಂಜರೀ.



**ಅವತಾರಿಕಾ** — ಶ್ರೀರಾಘವೇಂದ್ರ ಗುರುರಾಜರು ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯರು ಎಂಬ ಮಹಿಮೆಯನ್ನು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ —

**ಗುರುರಾದ್ಯಃ ಸ್ವಸಿದ್ಧಾಂತಪ್ರತಿಷ್ಠಾಪನಪಂಡಿತಮ್ ।**
**ಶ್ರುತ್ವಾ ಯಂ ವ್ಯಾಸನಿಕಟೇ ನಿಶ್ಚಿಂತ ಇವ ವರ್ತತೇ ॥ 39 ॥**

**ಪದಚ್ಛೇದ** — ಗುರುಃ, ಆದ್ಯಃ, ಸ್ವಸಿದ್ಧಾಂತಪ್ರತಿಷ್ಠಾನಪಂಡಿತಂ, ಶ್ರುತ್ವಾ, ಯಂ, ವ್ಯಾಸನಿಕಟೇ, ನಿಶ್ಚಿಂತಃ, ಇವ, ವರ್ತತೇ ।

**ಅನ್ವಯ** — ಆದ್ಯಃ ಗುರುಃ ಯಂ ಸ್ವಸಿದ್ಧಾಂತಪ್ರತಿಷ್ಠಾನಪಂಡಿತಂ ಶ್ರುತ್ವಾ ವ್ಯಾಸನಿಕಟೇ ನಿಶ್ಚಿಂತಃ ಇವ ವರ್ತತೇ ।

**ಅನ್ವಯಾರ್ಥ** —

**ಆದ್ಯಃ ಗುರುಃ** = ಶ್ರೀಮನ್ಮಧ್ವಾಚಾರ್ಯರು

**ಯಂ** = ಯಾವ ಶ್ರೀರಾಘವೇಂದ್ರತೀರ್ಥರನ್ನು

**ಸ್ವಸಿದ್ಧಾಂತಪ್ರತಿಷ್ಠಾಪನಪಂಡಿತಂ** — **ಸ್ವ** = ತನ್ನ , **ಸಿದ್ಧಾಂತ** = ಜೀವೇಶ್ವರಭೇದಸಿದ್ಧಾಂತವನ್ನು, **ಪ್ರತಿಷ್ಠಾಪನ** = ಸ್ಥಿರಗೊಳಿಸುವುದರಲ್ಲಿ, **ಪಂಡಿತಂ** = ಕುಶಲರನ್ನಾಗಿ

**ಶ್ರುತ್ವಾ**= ಕೇಳಿ

**ವ್ಯಾಸನಿಕಟೇ** = ಶ್ರೀವೇದವ್ಯಾಸರ ಬಳಿಯಲ್ಲಿ

**ನಿಶ್ಚಿಂತಃ ಇವ** = ಚಿಂತೆ ಇಲ್ಲದವರಂತೆ

**ವರ್ತತೇ** = ಇದ್ದಾರೆ.

**ತಾತ್ಪರ್ಯ**— ಶ್ರೀಮಧ್ವಾಚಾರ್ಯರು ತಮ್ಮ ಅವತಾರ ಕಾರ್ಯವನ್ನು ಮಾಡಿ, ಅದೃಶ್ಯರಾಗಿ ಹೋಗಿ ಬದರಿಯಲ್ಲಿ ತಮ್ಮ ಗುರುಗಳಾದ ಶ್ರೀವೇದವ್ಯಾಸರ ಸನ್ನಿಧಾನದಲ್ಲಿ ಈಗಲೂ ಇದ್ದಾರೆ. ಈ ಪ್ರಸಿದ್ಧಿಯನ್ನು ಇಟ್ಟು-ಕೊಂಡು ವರ್ಣಿಸುತ್ತಿದ್ದಾರೆ. ನಮ್ಮ ಆದಿಗುರುಗಳಾದ ಶ್ರೀಮಧ್ವಾಚಾರ್ಯರು, ಶ್ರೀರಾಘವೇಂದ್ರರು ದ್ವೈತ-ಸಿದ್ಧಾಂತವನ್ನು ಪ್ರತಿಷ್ಠಾ ಸುವುದರಲ್ಲಿ ಪಂಡಿತರಾಗಿದ್ದಾರೆ ಎಂಬುದನ್ನು ಕೇಳಿದರು. ಆದುದರಿಂದ ನಾನು ತಿರುಗಿ ಭರತಖಂಡಕ್ಕೆ ಸತ್ಸಿದ್ಧಾಂತದ ಪ್ರತಿಷ್ಠಾಪನೆಗಾಗಿ ಹೋಗಬೇಕಾದುದಿಲ್ಲ ಎಂದು ಶ್ರೀವೇದವ್ಯಾಸರ ಬಳಿಯಲ್ಲಿ ನಿಶ್ಚಿಂತರಾಗಿಯೋ ಎಂಬಂತೆ ಇದ್ದಾರೆ. (ಮಕ್ಕಳು ಪ್ರವೃದ್ಧರಾಗಿ ಕುಟುಂಬ ಭಾರವನ್ನು ಹೊರುವ ಸಾಮರ್ಥ್ಯ ಹೊಂದಿ ಜವಾಬ್ದಾರಿಯನ್ನು ನೋಡಿಕೊಳ್ಳುವಾಗ ಹಿರಿಯರು ಚಿಂತೆಯನ್ನು ಬಿಟ್ಟು ಇರುವಂತೆ ರಾಯರೇ ತಮ್ಮ ಕೆಲಸವನ್ನು ಮಾಡುತ್ತಿರುವುದರಿಂದ ಶ್ರೀಮದಾಚಾರ್ಯರು ನಿಶ್ಚಿಂತರಾಗಿ ಬದರಿಯಲ್ಲಿಯೇ ಇದ್ದಾರೆ ಎಂದು ಉತ್ಪ್ರೇಕ್ಷಿಸಿದ್ದಾರೆ.

**ವಿಗ್ರಹ** —

**ಆದ್ಯಃ** — ಆದೌ ಭವಃ ಆದ್ಯಃ ।

**ಸ್ವಸಿದ್ಧಾಂತಪ್ರತಿಷ್ಠಾಪನಪಂಡಿತಂ** — ಸ್ವಸ್ಯ ಸಿದ್ಧಾಂತಃ ಸ್ವಸಿದ್ಧಾಂತಃ, ಸ್ವಸಿದ್ಧಾಂತಸ್ಯ ಪ್ರತಿಷ್ಠಾಪನಂ ಸ್ವಸಿದ್ಧಾಂತಪ್ರತಿಷ್ಠಾಪನಂ, ಸ್ವಸಿದ್ಧಾಂತಪ್ರತಿಷ್ಠಾಪನೇ ಪಂಡಿತಃ ಸ್ವಸಿದ್ಧಾಂತಪ್ರತಿಷ್ಠಾಪನಪಂಡಿತಃ, ತಮ್ ।

**ವ್ಯಾಸನಿಕಟೇ** — ವ್ಯಾಸಸ್ಯ ನಿಕಟಂ ವ್ಯಾಸನಿಕಟಂ, ತಸ್ಮಿನ್ ।

**ನಿಶ್ಚಿಂತಃ** — ನಿರ್ಗತಾ ಚಿಂತಾ ಯಸ್ಮಾತ್ ಸಃ ನಿಶ್ಚಿಂತಃ ।

**ಕ್ರಿಯಾಪದ** — ವರ್ತತೇ - ವೃತು ವರ್ತನೇ ಇತಿ ವರ್ತಮಾನಾರ್ಥಕಾತ್ ವೃತ್ ಧಾತೋಃ ಅಕರ್ಮಕಾತ್ ಆತ್ಮನೇ- ಪದಿನಃ ಕರ್ತರಿ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ ವರ್ತತೇ ಇತಿ ರೂಪಮ್ ।

| | | |
|---|---|---|
| ವರ್ತತೇ, | ವರ್ತೇತೇ, | ವರ್ತಂತೇ । |
| ವರ್ತಸೇ, | ವರ್ತೇಥೇ, | ವರ್ತಧ್ವೇ। |
| ವರ್ತೇ, | ವರ್ತಾವಹೇ, | ವರ್ತಾಮಹೇ । |

**ಪ್ರಯೋಗ**— ಆದ್ಯಃ ಗುರುಃ ವ್ಯಾಸನಿಕಟೇ ವರ್ತತೇ । (ಅಕರ್ಮಕಾತ್ ಕರ್ತರಿ).

ಆದ್ಯೇನ ಗುರುಣಾ ವ್ಯಾಸನಿಕಟೇ ವೃತ್ಯತೇ । (ಭಾವೇ).

**ಅಲಂಕಾರ** — ಜಗತ್ಪಾಲನವನ್ನು ಮಾಡುವವನು ವಿಷ್ಣುವು ಒಬ್ಬನೇ. ಅವನೂ ಕೂಡ ನನ್ನ ಕಾರ್ಯವನ್ನು ಇವರೇ ಮಾಡುತ್ತಾರೆಂದು ನಿಶ್ಚಿಂತನಾಗಿ ನಿದ್ರಿಸುತ್ತಾನೆ ಎಂದು ಉತ್ಪ್ರೇಕ್ಷಿಸುತ್ತಾರೆ.



**ಅವತಾರಿಕಾ** — ಶ್ರೀರಾಯರ ಜಗದ್ರಕ್ಷಣೆಯ ಕಾರ್ಯವನ್ನು ವರ್ಣಿಸುತ್ತಾರೆ —

**ಗೋಪಾಯತಿ ದೃಢಂ ಯಸ್ಮಿನ್ನವನೀದೇವತಾಕುಲಮ್ ।**
**ಶಯಾನಃ ಶೇಷಶಯ್ಯಾಯಾಂ ನಿದ್ರಾತೀವ ಹರಿಶ್ಚಿರಮ್ ॥ 37 ॥**

**ಪದಚ್ಛೇದ**— ಗೋಪಾಯತಿ, ದೃಢಂ, ಯಸ್ಮಿನ್, ಅವನೀದೇವತಾಕುಲಂ, ಶಯಾನಃ, ಶೇಷಶಯ್ಯಾಯಾಂ, ನಿದ್ರಾತಿ ಇವ, ಹರಿಃ, ಚಿರಮ್ ।

**ಅನ್ವಯ**— ಯಸ್ಮಿನ್ ಅವನೀದೇವತಾಕುಲಂ ದೃಢಂ ಗೋಪಾಯತಿ ಸತಿ ಹರಿಃ ಶೇಷಶಯ್ಯಾಯಾಂ ಶಯಾನಃ ಇವ ಚಿರಂ ನಿದ್ರಾತೀವ ।

**ಅನ್ವಯಾರ್ಥ**—

**ಯಸ್ಮಿನ್** = ಯಾವ ಶ್ರೀರಾಘವೇಂದ್ರಗುರುಸಾರ್ವಭೌಮರು

**ಅವನೀದೇವತಾಕುಲಂ** = ಬ್ರಾಹ್ಮಣಸಮೂಹವನ್ನು

**ದೃಢಂ** = ಚೆನ್ನಾಗಿ

**ಗೋಪಾಯತಿ (ಸತಿ)** = ಕಾಪಾಡುತ್ತಿರಲಾಗಿ

**ಹರಿಃ** = ಶ್ರೀಮನ್ನಾರಾಯಣನು

**ಶೇಷಶಯ್ಯಾಯಾಂ** = (ಶ್ವೇತದ್ವೀಪದಲ್ಲಿ) ಶೇಷನೆಂಬ ಮಂಚದ ಮೇಲೆ (ಶೇಷನೆಂಬ ಹಾಸಿಗೆಯಲ್ಲಿ)

**ಚಿರಂ** = ಬಹುಕಾಲದಿಂದ

**ನಿದ್ರಾತೀವ** = ನಿದ್ದೆ ಮಾಡುತ್ತಾನೋ ಎಂಬಂತೆ ಇದ್ದಾನೆ.

**ತಾತ್ಪರ್ಯ—** ಶ್ರೀರಾಘವೇಂದ್ರಗುರುಸಾರ್ವಭೌಮರು ಬ್ರಾಹ್ಮಣರೆಲ್ಲರನ್ನೂ ಚೆನ್ನಾಗಿ ರಕ್ಷಿಸುತ್ತಿದ್ದರು. ಆಗ ಶ್ರೀನಾರಾಯಣನು ತಾನು ಮಾಡುವ ಸಜ್ಜನ ಜಗದ್ರಕ್ಷಣೆಯ ಕಾರ್ಯವನ್ನು ತನ್ನ ಭಕ್ತಾಗ್ರೇಸರರಾದ ಶ್ರೀರಾಘವೇಂದ್ರತೀರ್ಥರು ಮಾಡುತ್ತಿರುವರೆಂದು ತಿಳಿದು ಜಗದ್ರಕ್ಷಣೆಯ ಚಿಂತೆಯನ್ನು ಬಿಟ್ಟು ಶ್ವೇತದ್ವೀಪದಲ್ಲಿರುವ ಶೇಷಮಂಚದಲ್ಲಿ (ಶೇಷನೆಂಬ ಹಾಸಿಗೆಯಲ್ಲಿ) ಮಲಗಿ ನಿದ್ರಿಸುತ್ತಿದ್ದಾನೋ ಎಂಬಂತಿದ್ದಾನೆ.

ವಿಗ್ರಹ—

**ಗೋಪಾಯತಿ —** ಗೋಪಾಯತಿ ಇತಿ ಗೋಪಾಯನ್, ತಸ್ಮಿನ್ ಗೋಪಾಯತಿ (ಸತಿ) । ಗುಪೂ ರಕ್ಷಣೇ ಎಂಬ ಧಾತುವಿನ ವರ್ತಮಾನಾರ್ಥಕ ಶತೃಪ್ರತ್ಯಯಾಂತ ರೂಪ.

**ಅವನೀದೇವತಾಕುಲಂ —** ಅವನ್ಯಾಃ ದೇವತಾಃ ಅವನೀದೇವತಾಃ, ಅವನೀದೇವತಾನಾಂ ಕುಲಂ ಅವನೀದೇವತಾಕುಲಂ, ತತ್ ।

**ಶೇಷಶಯ್ಯಾಯಾಂ —** ಶಷ ಏವ ಶಯ್ಯಾ ಶೇಷಶಯ್ಯಾ, ತಸ್ಯಾಂ ಶೇಷಶಯ್ಯಾಯಾಮ್ ।

**ಕ್ರಿಯಾಪದ—** ನಿದ್ರಾತಿ - ನಿದ್ರಾ ಜಾಗೃಕ್ಷಯೇ ಇತಿ ಜಾಗೃಕ್ಷಯಾರ್ಥಕಾತ್ ನಿದ್ರಾಧಾತೋಃ ಅಕರ್ಮಕಾತ್ ಪರಸ್ಮೈಪದಿನಃ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನಮ್ ।

| | | |
|---|---|---|
| ನಿದ್ರಾತಿ, | ನಿದ್ರಾತಃ, | ನಿದ್ರಾಂತಿ । |
| ನಿದ್ರಾಸಿ, | ನಿದ್ರಾಥಃ, | ನಿಧ್ರಾಥ । |
| ನಿದ್ರಾಮಿ, | ನಿದ್ರಾವಃ, | ನಿದ್ರಾಮಃ । |

ಪ್ರಯೋಗ— ಹರಿಃ ನಿದ್ರಾತೀವ । (ಅಕರ್ಮಕಾತ್ ಕರ್ತರಿ).
ಹರಿಣಾ ನಿದ್ರಾಯತೇ ಇವ । (ಭಾವೇ).

**ಅಲಂಕಾರ —** ಇಲ್ಲಿ ಪರಮಾತ್ಮನು ವಾಸ್ತವವಾಗಿ ನಿದ್ದೆ ಮಾಡದಿದ್ದರೂ ನಿದ್ದೆ ಮಾಡುತ್ತಾನೆಂದು ಉತ್ಪ್ರೇಕ್ಷಿಸಿದ್ದಾರೆ. ಆದ್ದರಿಂದ ಉತ್ಪ್ರೇಕ್ಷಾಲಂಕಾರ. ಈ ಉತ್ಪ್ರೇಕ್ಷೆಗೆ ಮೂಲ, ಶ್ರೀಗುರುರಾಜರು ದೃಢವಾಗಿ ಭೂಸುರ ಕುಲವನ್ನು ರಕ್ಷಿಸುತ್ತಿರುವುದು.ಶ್ರೀಗುರುರಾಜರು ಬ್ರಾಹ್ಮಣ ಕುಲವನ್ನು ರಕ್ಷಿಸುತ್ತಿರುವುದು ಶ್ರೀಮನ್ನಾರಾಯಣನು ಶ್ವೇತದ್ವೀಪದ ಶೇಷಶಯ್ಯೆಯಲ್ಲಿ ಪವಡಿಸಿರುವುದಕ್ಕೆ ಹೇತುವಲ್ಲದಿದ್ದರೂ ಅದನ್ನು ಹೇತುತ್ವೇನ ಉತ್ಪ್ರೇಕ್ಷಿಸಿ ವರ್ಣಿಸಿರುವುದರಿಂದ ಸಿದ್ಧ ಹೇತೂತ್ಪ್ರೇಕ್ಷಾಲಂಕಾರವಾಗಿದೆ ಎಂಬುದಾಗಿ ಅಲಂಕಾರ ಪ್ರತಿಪಾದನೆ ಮಾಡುವುದು ಸರಿಯೆಂದು ಕಾಣುವುದಿಲ್ಲ.'ಅವನೀ ದೇವತಾಕುಲ ಗೋಪನವು ಹೇತುವಲ್ಲದಿದ್ದರೂ ಅದನ್ನು ಹೇತುವೆಂದು ಇಲ್ಲಿ ಉತ್ಪ್ರೇಕ್ಷಿಸಿಲ್ಲ.'ಶ್ರೀರಾಯರು ಮಾಡುವ ಅವನೀದೇತಾಕುಲಗೋಪನದಿಂದ ಹರಿಯು ನಿದ್ದೆ ಮಾಡದಿದ್ದರೂ ನಿದ್ದೆ ಮಾಡುತ್ತಾನೋ ಎಂದು ನಿದ್ರಾ ಸ್ವರೂಪ ಉತ್ಪ್ರೇಕ್ಷ ಮಾಡಿದ್ದಾರೆ.

★ ★ ★

**ಅವತಾರಿಕಾ —** ಅವರ ಸ್ಮರಣ ಮಾತ್ರದಿಂದ ಶ್ರೀಗುರುರಾಜರು ಪರಮೈಶ್ವರ್ಯವನ್ನು ಕೊಡುತ್ತಾರೆ. ಎಂಬ ಮಹಿಮೆಯನ್ನು ಮುಂದಿನ ಪದ್ಯದಿಂದ ವರ್ಣಿಸುತ್ತಾರೆ —

**ಪದೇ ಪದೇ ಪ್ರಪನ್ನಾನಾಂ ಸಂಪದಃ ಸ್ಮೃತಿಸಂಭವೇ (ಸ್ಮೃತಿಸಂಭವಾಃ) ।**
**ಪರೀಭಾವಪ್ರದೇ ಯಸ್ಮಿನ್ ಶೈಲೇ ಶೇತೇ ನು ಶಂಕರಃ ॥ 38 ॥**

**ಪದಚ್ಛೇದ—** ಪದೇ, ಪದೇ, ಪ್ರಪನ್ನಾನಾಂ, ಸಂಪದಃ, ಸ್ಮೃತಿಸಂಭವೇ, (ಸ್ಮೃತಿಸಂಭವಾಃ) ಪರೀಭಾವಪ್ರದೇ, ಯಸ್ಮಿನ್, ಶೈಲೇ, ಶೇತೇ, ನು, ಶಂಕರಃ ।

**ಅನ್ವಯ—** ಪದೇ ಪ್ರಪನ್ನಾನಾಂ ಗುರೋಃ ಸ್ಮೃತಿಸಂಭವೇ ಸತಿ ಸಂಪದಃ ಪದೇ ಯಸ್ಮಿನ್ ಪರೀಭಾವಪ್ರದೇ (ಸತಿ) ಶೈಲೇ ಶಂಕರಃ ಶೇತೇ ನು ?

**ಅನ್ವಯಾರ್ಥ — (ಬಾ.ಬೋ.)**

**ಪದೇ** = ತಮ್ಮ ಪಾದಗಳಲ್ಲಿ

**ಪ್ರಪನ್ನಾನಾಂ** = ಶರಣಾಗತರಾದವರಿಗೆ

**ಸ್ಮೃತಿಸಂಭವೇ (ಸತಿ)** = ಶ್ರೀರಾಯರ ಸ್ಮರಣೇ ಬರುತ್ತಿರಲಾಗಿ

**ಸಂಪದಃ** = ಸಂಪತ್ತಿಗೆ

**ಪದೇ** = ಆಶ್ರಯರಾದ

**ಯಸ್ಮಿನ್** = ಯಾವ ಶ್ರೀಗುರುಸಾರ್ವಭೌಮರು

**ಪರೀಭಾವಪ್ರದೇ (ಸತಿ)** = ತಿರಸ್ಕಾರ ಮಾಡುತ್ತಿರಲಾಗಿ

**ಶಂಕರಃ** = ಶ್ರೀರುದ್ರದೇವರು

**ಶೈಲೇ** = ರಜತಾದ್ರಿಯಲ್ಲಿ

**ಶೇತೇ ನು ?** = ಮಲಗಿದ್ದಾನೇನು ?

**ಅನ್ವಯ—** *(ಗುರುಪಾದಸೇವಾ ವ್ಯಾಖ್ಯಾನ ಪ್ರಕಾರ)* ಪ್ರಪನ್ನಾನಾಂ ಪದೇ ಪದೇ ಸಂಪದಃ ಯತಃ (ತತಃ) ಸ್ಮೃತಿಸಂಭವಾಃ ಯಸ್ಮಿನ್ ಪರೀಭಾವಪ್ರದೇ (ಸತಿ) ಶಂಕರಃ ಶೈಲೇ ಶೇತೇ ನು ?

**ಅನ್ವಯಾರ್ಥ—**

**ಪ್ರಪನ್ನಾನಾಂ** = ಶರಣಾಗತರಿಗೆ

**ಪದೇ ಪದೇ** = ಆಗಾಗ್ಗೇ (ಅನೇಕ ಬಾರಿ)

**ಸಂಪದಃ** = ಸಂಪತ್ತುಗಳು

**ಸ್ಮೃತಿಸಂಭವಾಃ** = ಸ್ಮರಣಮಾತ್ರದಿಂದ ಹುಟ್ಟುವುಗಳು

**(ಯತಃ ಭವಂತಿ ತತಃ** = ಯಾವ ಕಾರಣದಿಂದ ಉಂಟಾಗುತ್ತವೆಯೋ ಆ ಕಾರಣದಿಂದ)

**ಯಸ್ಮಿನ್** = ಯಾವ ರಾಘವೇಂದ್ರಗುರುಗಳು

**ಪರೀಭಾವಪ್ರದೇ ಸತಿ** = ಅವಮಾನವನ್ನು ಉಂಟು ಮಾಡುತ್ತಿರಲಾಗಿ

**ಶಂಕರಃ ಶೈಲೇ ಶೇತೇ ನು ?** = ಈಶ್ವರನು ಕೈಲಾಸ ಪರ್ವತದಲ್ಲಿ ಮಲಗಿರುತ್ತಾನೆಯೋ ಏನು ?

**ತಾತ್ಪರ್ಯ—** (ಬಾ.ಬೋ. ವ್ಯಾಖ್ಯಾನಪ್ರಕಾರ) ಶ್ರೀರಾಘವೇಂದ್ರಗುರುಸಾರ್ವಭೌಮರು ತಮ್ಮ ಪಾದಗಳಲ್ಲಿ ಶರಣಾಗತರಾದವರಿಗೆ ಅವರ ಸ್ಮರಣಮಾತ್ರದಿಂದಲೇ ಸಂಪತ್ತನ್ನು ಉಂಟು ಮಾಡಿಕೊಡುತ್ತಾರೆ. ಇಂತಹ ಗುರುಗಳು ಚಿರಕಾಲ ತಪಸ್ಸನ್ನು ಮಾಡಿದವರಿಗೆ ಐಶ್ವರ್ಯಪ್ರದನಾದ ಈಶ್ವರನಿಗಿಂತಲೂ ಹೆಚ್ಚು ಸಂಪತ್ತನ್ನು ಭಕ್ತರಿಗೆ ಕೊಟ್ಟು ಈಶ್ವರನಿಗೆ ಅವಮಾನವನ್ನು ಉಂಟು ಮಾಡುತ್ತಾರೋ ಎಂಬಂತೆ ಇರಲಾಗಿ ಈಶ್ವರನು ಅಸಮಾಧಾನದಿಂದ ಕೈಲಾಸ ಪರ್ವತದಲ್ಲಿ ಮೇಲೆ ಮಲಗಿದ್ದಾನೋ ಏನೋ ? ಎಂಬಂತಿದ್ದಾನೆ.

**ತಾತ್ಪರ್ಯ** — (ಗು.ಪಾ.ಸೇ.) ಶ್ರೀಗುರುರಾಜರು ಶರಣಾಗತರಾದ ಭಕ್ತರಿಗೆ ಆಗಾಗ್ಗೆ ಅತುಲ ಸಂಪತ್ತನ್ನು ಕೊಡುತ್ತಾರೆ. ಅವರ ಸ್ಮರಣ ಮಾತ್ರದಿಂದ ಈ ಸಂಪತ್ತುಗಳು ಉಂಟಾಗುತ್ತವೆ. ಭಕ್ತರು ತಪಸ್ಸು ಮಾಡಿ ಪ್ರಸನ್ನೀ-ಕರಿಸಿಕೊಂಡಾಗ ಒಂದು ಬಾರಿ ಮಾತ್ರ ಸಂಪತ್ತನ್ನು ಕೊಡುವ ಶಂಕರನು ಇದರಿಂದ ಅವಮಾನಿತನಾಗಿ ಕೈಲಾಸ ಪರ್ವತದಲ್ಲಿ ಮಲಗಿದ್ದಾನೋ ಏನೋ ಎಂಬಂತಿದ್ದಾನೆ.

**ಅಲಂಕಾರ** — ಇಲ್ಲಿಯೂ ಪೂರ್ವಶ್ಲೋಕದಂತೆ ಉತ್ಪ್ರೇಕ್ಷಾಲಂಕಾರವಿದೆ.

ವಿಗ್ರಹ —

**ಸ್ಮೃತಿಸಂಭವೇ** — ಸ್ಮೃತ್ಯಾ ಸಂಭವಃ ಸ್ಮೃತಿಸಂಭವಃ ತಸ್ಮಿನ್ ಸ್ಮೃತಿಸಂಭವೇ (ಸತಿ) ಸ್ಮೃತೇಃ ಸಂಭವಃ ಯಾಸಾಂ ತಾಃ ಸ್ಮೃತಿಸಂಭವಾಃ (ಸಂಪದಃ) ।

**ಪರೀಭಾವಪ್ರದಃ** — ಪರಿಭಾವಃ ಏವ ಪರೀಭಾವಃ 'ಉಪಸರ್ಗಸ್ಯ ಘಞಿ ಮನುಷ್ಯೇ ಬಹುಲಂ' (6-3-122) ಸೂತ್ರದಿಂದ ಉಪಸರ್ಗಕ್ಕೆ ದೀರ್ಘವು ಬಂದಿದೆ. ಪ್ರದದಾತೀತಿ ಪ್ರದಃ ಪರೀ-ಭಾವಸ್ಯ ಪ್ರದಃ ಪರೀಭಾವಪ್ರದಃ, ತಸ್ಮಿನ್ ।

**ಕ್ರಿಯಾಪದ** — ಶೇತೇ - ಶೀಙ್ ಸ್ವಪ್ನೇ ಇತಿ ಸ್ವಪ್ನಾರ್ಥಕಾತ್ ಶೀಙ್‌ಧಾತೋಃ ಆತ್ಮನೇಪದಿನಃ ಅಕರ್ಮಕಾತ್ ವರ್ತಮಾನೇ ಲಟ್ ಪ್ರಥಮಪುರುಷೇ ಏಕವಚನೇ ಶೇತೇ ಇತಿ ರೂಪಮ್ ।

| | | |
|---|---|---|
| ಶೇತೇ | ಶಯಾತೇ | ಶೇರತೇ । |
| ಶೇಷೇ | ಶಯಾಥೇ | ಶೇಧ್ವೇ । |
| ಶಯೇ | ಶೇವಹೇ | ಶೇಮಹೇ । |

ಆತ್ಮನೇಪದ ಪ್ರತ್ಯಯಗಳು ಲಟ್‌ನಲ್ಲಿ ಹೀಗೆ ಬರುತ್ತವೆ — ತೇ, ಆತೇ, ಅಂತೇ । ಸೇ, ಆಥೇ, ಧ್ವೇ । ಏ, ವಹೇ, ಮಹೇ ॥ ಇವುಗಳಿಗೆ ಹಿಂದೆ ಧಾತುವನ್ನು ಸೇರಿಸಿ ಗುಣ ಮಾಡಿಕೊಂಡು ಮುಂದೆ ಅಚ್ ಇದ್ದರೆ ಅಯಾ-ದ್ಯಾದೇಶ ಮಾಡಿದಾಗ ಶೀ+ತೇ ಗುಣ ಶೇತೇ. ಶೀ+ಅತೇ ಗುಣ ಶೇ+ಅತೇ ಅಯಾ ದೇಶ ಶಯಾತೇ, ಶೀ+ಅತೇ ಗುಣ ಶೇ+ಅತೇ 'ಶೀಙೋ ರುಟ್' ಎಂಬ ಸೂತ್ರದಿಂದ ರುಟ್ ಶೇರತೇ. ಶೀ+ಸೇ ಗುಣ, ಷತ್ವ ಶೇಷೇ ಶೀ+ಆಥೇ ಗುಣ, ಅಯಾದೇಶ ಶಯಾಥೇ ಶೀ+ಧ್ವೇ ಗುಣಶೇಧ್ವೇ ಇತ್ಯಾದಿ ರೂಪಗಳಾಗುತ್ತವೆ ಎಂದು ತಿಳಿಯಬೇಕು. ಶೇ+ಧ್ವೇ ಎಂದಿರುವಾಗ ಮುಂದೆ ಅಚ್ ಇಲ್ಲದಿರುವುದರಿಂದ ಅಯಾದೇಶ ಬರುವುದಿಲ್ಲ, ಶಯಧ್ವೇ ಎಂಬ ರೂಪ ಅಶುದ್ಧ.

**ಪ್ರಯೋಗ** — ಶಂಕರಃ ಶೈಲೇ ಶೇತೇ । (ಅಕರ್ಮಕಾತ್ ಕರ್ತರಿ).

ಶಂಕರೇಣ ಶೈಲೇ ಶಯ್ಯತೇ । (ಭಾವೇ).



**ಅವತಾರಿಕಾ** — ಇವರು ಮಾಡಿರುವ ವ್ಯಾಖ್ಯಾನವು ಮೂರು ಲೋಕಗಳಲ್ಲಿಯೂ ಪ್ರಸಿದ್ಧವೆಂದು ತಿಳಿಸುತ್ತಾರೆ —

**ವ್ಯಾಖ್ಯಾಂ ಪ್ರಖ್ಯಾಪ್ಯ ವಿಖ್ಯಾತೌ ಸಂಖ್ಯಾವತ್ಸು ಯದೀರಿತಾಮ್ ।**
**ಸುರಲೋಕೇ ಸುರಗುರುಃ ಪಾತಾಲೇ ಫಣಿನಾಂ ಪತಿಃ ॥ 39 ॥**

**ಪದಚ್ಛೇದ—** ವ್ಯಾಖ್ಯಾಂ, ಪ್ರಖ್ಯಾಪ್ಯ, ವಿಖ್ಯಾತೌ, ಸಂಖ್ಯಾವತ್ಸು, ಯದೀರಿತಾಂ, ಸುರಲೋಕೇ, ಸುರ–ಗುರುಃ, ಪಾತಾಲೇ, ಫಣಿನಾಂ, ಪತಿಃ ।

**ಅನ್ವಯ —** ಸುರಗುರುಃ ಫಣಿನಾಂ ಪತಿಃ (ಚ) ಯದೀರಿತಾಂ ವ್ಯಾಖ್ಯಾಂ ಸಂಖ್ಯಾವತ್ಸು ಪ್ರಖ್ಯಾಪ್ಯ ಸುರ–ಲೋಕೇ ಪಾತಾಲೇ (ಚ) ವಿಖ್ಯಾತೌ ।

**ಅನ್ವಯಾರ್ಥ—**

**ಸುರಗುರುಃ** = ಬೃಹಸ್ಪತ್ಯಾಚಾರ್ಯರು

**ಫಣಿನಾಂ** = ಸರ್ಪಗಳ

**ಪತಿಃ (ಚ)** = ಸ್ವಾಮಿಯಾದ ಶೇಷನು (ಇವರಿಬ್ಬರು)

**ಯದೀರಿತಾಂ** = ಯಾವ ಶ್ರೀರಾಘವೇಂದ್ರಗುರುಗಳಿಂದ ಹೇಳಲ್ಪಟ್ಟ (ರಚಿಸಲ್ಪಟ್ಟ)

**ವ್ಯಾಖ್ಯಾಂ** = ವ್ಯಾಖ್ಯಾನಗ್ರಂಥವನ್ನು

**ಸಂಖ್ಯಾವತ್ಸು** = ಪಂಡಿತರಲ್ಲಿ

**ಪ್ರಖ್ಯಾಪ್ಯ** = ಪ್ರವಚನದಿಂದ ಪ್ರಸಿದ್ಧಗೊಳಿಸಿ (ಚೆನ್ನಾಗಿ ಬೋಧಿಸಿ)

**ಸುರಲೋಕೇ** = ದೇವಲೋಕದಲ್ಲಿ

**ಪಾತಾಲೇ (ಚ)** = ಪಾತಾಳದಲ್ಲಿಯೂ

**ವಿಖ್ಯಾತೌ** = ಪ್ರಸಿದ್ಧರಾದರು.

**ತಾತ್ಪರ್ಯ —** ಶ್ರೀರಾಘವೇಂದ್ರಗುರುಸಾರ್ವಭೌಮರು ಮಾಡಿರುವ ವ್ಯಾಖ್ಯಾನವನ್ನು ಅಂದರೆ ಶ್ರೀಮದಾಚಾರ್ಯರಿಗೆ ಪರಮ ಸಮ್ಮತವಾದ ಶ್ರೀಸೂತ್ರಭಾಷ್ಯಾದಿಗಳಲ್ಲಿ ವಿವರಿಸಿರುವ ಅಭಿಪ್ರಾಯವನ್ನು ಬೃಹಸ್ಪತ್ಯಾಚಾರ್ಯರು ದೇವಲೋಕದಲ್ಲಿಯೂ, ನಾಗಾಧಿಪತಿಯಾದ ಶೇಷನು ಪಾತಾಳ ಲೋಕದಲ್ಲಿಯೂ ಪಂಡಿತರಾದ ಶಿಷ್ಯರಿಗೆ ಪಾಠ ಪ್ರವಚನಗಳಿಂದ ಬೋಧಿಸಿ ತಾವು ದೊಡ್ಡ ಪಂಡಿತರೆಂದು ಪ್ರಸಿದ್ಧರಾದರು. ಹೀಗೆ ಗುರುಸಾರ್ವಭೌಮರು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ಶ್ರೀಮದಾಚಾರ್ಯರ ಗ್ರಂಥಗಳ ನಿಜವಾದ ಅಭಿಪ್ರಾಯಗಳನ್ನೊಳಗೊಂಡ ವ್ಯಾಖ್ಯಾನ ಗ್ರಂಥಗಳನ್ನು ರಚಿಸಿದ ಮಹಾಮಹಿಮರು ಎಂದು ಭಾವ.

**ವಿಗ್ರಹ—**

**ಯದೀರಿತಾಂ —** ಯೇನ ಈರಿತಾ ಯದೀರಿತಾ, ತಾಮ್ ।

**ಸುರಲೋಕೇ —** ಸುರಾಣಾಂ ಲೋಕಃ, ಸುರಲೋಕಃ, ತಸ್ಮಿನ್ ।

**ಸುರಗುರುಃ —** ಸುರಾಣಾಂ ಗುರುಃ, ಸುರಗುರುಃ ।

**ಫಣಿನಾಂ —** ಫಣಾಃ ಏಷಾಂ ಸಂತೀತಿ ಫಣಿನಃ, ತೇಷಾಂ ಫಣಿನಾಮ್ ।

**ವಿಶೇಷಾಂಶ —** ಶ್ರೀರಾಘವೇಂದ್ರಗುರುರಾಜರು ಕರ್ಮಜ ದೇವತೆಗಳಾದ ಪ್ರಹ್ಲಾದರ ಅಂಶ ಸಂಭೂತರು. ಆದ್ದರಿಂದ ತಾರತಮ್ಯದಲ್ಲಿ ಶೇಷ ಬೃಹಸ್ಪತಿಗಳಿಗಿಂತ ಕೆಳಗಿನವರು. ಹೀಗಿರುವಾಗ ಶ್ರೀರಾಯರ ಗ್ರಂಥಗಳನ್ನು ಅಧ್ಯಾಪನ ಮಾಡಿಸಿ ಶೇಷ ಬೃಹಸ್ಪತಿಗಳು ಪ್ರಸಿದ್ಧರಾದರೆಂದು ಹೇಳುವುದು ಹೇಗೆ ಸರಿಹೊಂದುತ್ತದೆ ಎಂಬ ಆಕ್ಷೇಪವು ಬರಬಹುದು. ಆದರೆ ಕಾವ್ಯಗಳಲ್ಲಿ ಉತ್ಪ್ರೇಕ್ಷೆ ಅತಿಶಯೋಕ್ತಿಗಳ ಮೂಲಕ ವಿಷಯಗಳ ವರ್ಣನೆಯನ್ನು ಮಾಡಿ ಆ ವಿಷಯಗಳ ಮಹತ್ತ್ವವನ್ನು ತಿಳಿಸುವ ಪದ್ಧತಿಯಿದೆ. ಅದರಂತೆ ಇಲ್ಲಿ ಶೇಷ ಬೃಹಸ್ಪತಿಗಳು ರಾಯರ

ವ್ಯಾಖ್ಯಾನ ಗ್ರಂಥಗಳನ್ನು ಅಧ್ಯಯನ ಮಾಡಿ ಅಧ್ಯಾಪನ ಮಾಡಿಸಿಯೇ ಪಂಡಿತರಾದರೋ ಏನೋ ಎಂಬಂತೆ ಇದೆ ಎಂದು ಉತ್ಪ್ರೇಕ್ಷಾಲಂಕಾರವನ್ನಿಟ್ಟುಕೊಂಡಾಗ ರಾಯರ ವ್ಯಾಖ್ಯಾನ ಗ್ರಂಥಗಳು ಅಷ್ಟೊಂದು ಪ್ರೌಢ ಮತ್ತು ಶ್ರೀಮದಾಚಾರ್ಯರಿಗೆ ಪರಮಸಮ್ಮತಗಳಾದ ಉತ್ತಮ ವಿಷಯಗರ್ಭಿತವಾಗಿದೆ ಎಂದು ತಿಳಿಯುತ್ತದೆ.

ಇನ್ನೊಂದು ರೀತಿಯಿಂದಲೂ ಇಲ್ಲಿ ಸಮಾಧಾನ ಹೇಳಬಹುದು. ರಾಯರು ಪ್ರಹ್ಲಾದರ ಅವತಾರರು. ಪ್ರಹ್ಲಾದರಿಗೆ ತಮಗಿಂತ ಉತ್ತಮರಾದ ನಾರದರಿಂದ ಉಪದೇಶವಾಗಿದೆ, ಅನುಗ್ರಹವಾಗಿದೆ. ಮತ್ತು ಅವರಲ್ಲಿ ಅಸುರಾವೇಶವಿಲ್ಲ 'ಪ್ರಹ್ಲಾದೋ ನಿತ್ಯ ಭಕ್ತಿಮಾನ್' ಎಂಬಂತೆ ನಿರಂತರವೂ ಪರಮಾತ್ಮನಲ್ಲಿ ಭಕ್ತಿಯುಳ್ಳವರು ಅವರು. ವಾಯುದೇವರ ವಿಶೇಷಾನುಗ್ರಹ ಮತ್ತು ಆವೇಶವುಳ್ಳವರು. ಆದ್ದರಿಂದ ಪ್ರಹ್ಲಾದರ ಅವತಾರರಾದ ಶ್ರೀರಾಯರು ರಚಿಸಿರುವ ಗ್ರಂಥಗಳನ್ನು ಬೃಹಸ್ಪತಿ ಶೇಷರೂ ಅಧ್ಯಾಪನದಿಂದ ಪ್ರಸಿದ್ಧಗಳೊಳಿಸಿ ಪ್ರಖ್ಯಾತರಾದರು ಎಂದು ವರ್ಣಿಸುವುದು ಪ್ರಮಾಣ ವಿರುದ್ಧವಾಗುವುದಿಲ್ಲವೆಂದು ತಿಳಿಯಬಹುದು. ಇದರಂತೆ ಹಿಂದೆ ಸಂಪತ್ತನ್ನು ಕೊಡುವ ವಿಷಯದಲ್ಲಿ ಮಹಾರುದ್ರರಿಗೆ ತಿರಸ್ಕಾರವುಂಟು ಮಾಡುತ್ತಿದ್ದರು ಎಂಬ ವಿಷಯವೂ ಕೊಡುತ್ತದೆ ಎಂದು ತಿಳಿಯಬೇಕು.

ಮುಂದಿನ ಶ್ಲೋಕದಲ್ಲಿಯೂ ಹೀಗೆಯೇ ತಿಳಿಯಬೇಕು.

ಶ್ರೀಮನ್ನ್ಯಾಯಸುಧೆಯಲ್ಲಿ 'ಪರಂ ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ' ಎಂಬ ಜಯತೀರ್ಥರ ವಾಣಿಯ ಅಭಿಪ್ರಾಯದಂತೆ ರಾಯರು ನುಡಿದ ಮಾತು ಶೇಷ ರುದ್ರ ಬೃಹಸ್ಪತ್ಯಾದಿಗಳಿಗೂ ಪರಮಸಂಮತ-ವೆಂದು ಅಭಿಪ್ರಾಯವು ಇಲ್ಲಿ ಸೂಚಿತವಾಗಿದೆ.



**ಅವತಾರಿಕಾ** — ಮುಂದಿನ ಶ್ಲೋಕದಲ್ಲಿ ಶ್ರೀರಾಯರಲ್ಲಿರುವ ಅನಿತರಸಾಧಾರಣವಾದ ಚಿತ್ತಮಾರ್ದವ ಗಾಂಭೀರ್ಯ ಮತ್ತು ಪಾಂಡಿತ್ಯಗಳನ್ನು ವರ್ಣಿಸುತ್ತಾರೆ —

**ಚಿತ್ತೇ ಚೇನ್ಮೃದುತಾ ಶಿರೀಷಸದೃಶೇ ಹೈಯ್ಯಂಗವೀನಂ ಶಿಲಾ**
**ಗಾಂಭೀರ್ಯಂ ಯದಿ ಯಸ್ಯ ಸೋಽಂಧುರುದಧಿಃ ಶಾಸ್ತ್ರೇಷು ಚೇತ್ ಪಾಂಡಿತೀ ।**
**ಆಚಾರ್ಯೋ ವಿಬುಧೇಶಿತುಃ ಕಲಯತೇ ವಿದ್ಯಾರ್ಥಿತಾಮಾದರಾತ್**
**ಔದಾರ್ಯಂ ಯದಿ ಕಲ್ಪಪಾದಪಮುಖಾಃ ಸಂಭಾವಯಂತೇಽರ್ಥಿತಾಮ್ ॥ 40 ॥**

**ಪದಚ್ಛೇದ—** ಚಿತ್ತೇ, ಚೇತ್, ಮೃದುತಾ, ಶಿರೀಷಸದೃಶೇ, ಹೈಯ್ಯಂಗವೀನಂ, ಶಿಲಾ, ಗಾಂಭೀರ್ಯಂ, ಯದಿ, ಯಸ್ಯ, ಸಃ, ಅಂಧುಃ, ಉದಧಿಃ, ಶಾಸ್ತ್ರೇಷು, ಚೇತ್, ಪಾಂಡಿತೀ, ಆಚಾರ್ಯಃ, ವಿಬುಧೇಶಿತುಃ, ಕಲಯತೇ, ವಿದ್ಯಾರ್ಥಿತಾಂ, ಆದರಾತ್, ಔದಾರ್ಯಂ, ಯದಿ, ಕಲ್ಪಪಾದಪಮುಖಾಃ, ಸಂಭಾವಯಂತೇ, ಅರ್ಥಿತಾಮ್ ।

**ಅನ್ವಯ—** ಯಸ್ಯ ಶಿರೀಷಸದೃಶೇ ಚಿತ್ತೇ ಮೃದುತಾ (ದೃಷ್ಟಾ) ಚೇತ್ ಹೈಯ್ಯಂಗವೀನಂ ಶಿಲಾ (ಭಾತಿ) ಯಸ್ಯ ಗಾಂಭೀರ್ಯಂ (ದೃಷ್ಟಂ) ಯದಿ ಸಃ ಉದಧೀಃ ಅಂಧುಃ (ಭಾತಿ) ಶಾಸ್ತ್ರೇಷು ಪಾಂಡಿತೀ (ದೃಷ್ಟಾ) ಚೇತ್ ವಿಬುಧೇಶಿತುಃ ಆಚಾರ್ಯಃ ಆದರಾತ್ ವಿದ್ಯಾರ್ಥಿತಾಂ ಕಲಯತೇ ಔದಾರ್ಯಂ (ದೃಷ್ಟಂ) ಯದಿ ಕಲ್ಪಪಾದಪ-ಮುಖಾಃ, ಅರ್ಥಿತಾಂ ಸಂಭಾವಯಂತೇ ।

**ಅನ್ವಯಾರ್ಥ—**

**ಯಸ್ಯ** = ಯಾವ ಶ್ರೀರಾಘವೇಂದ್ರಗುರುಸಾರ್ವಭೌಮರ

**ಶಿರೀಷಸದೃಶೇ** = ಶಿರೀಷ ಪುಷ್ಪಕ್ಕೆ ಸಮಾನವಾದ

**ಚಿತ್ತೇ** = ಮನಸ್ಸಿನಲ್ಲಿ

**ಮೃದುತಾ** = ಕೋಮಲತೆಯು

**(ದೃಷ್ಟಾ) ಚೇತ್** = ನೋಡಲ್ಪಟ್ಟರೆ

**ಹೈಯ್ಯಂಗವೀನಂ** = ಹೊಸ ತುಪ್ಪವು

**ಶಿಲಾ (ಭಾತಿ)** = ಕಲ್ಲಾಗಿ ಕಾಣಿಸುತ್ತದೆ

**ಯಸ್ಯ** = ಯಾವ ಗುರುರಾಜರ

**ಗಾಂಭೀರ್ಯಂ** = ಗಂಭೀರ ಸ್ವಭಾವವು.

**(ದೃಷ್ಟಂ) ಯದಿ** = ನೋಡಲ್ಪಟ್ಟರೆ

**ಸಃ ಉದಧೀಃ** = ಗಂಭೀರವೆಂದು ಪ್ರಸಿದ್ಧವಾದ ಆ ಸಮುದ್ರವೂ

**ಅಂಧುಃ (ಭಾತಿ)** = ಬಾವಿಯಾಗಿ ಕಾಣಿಸುತ್ತದೆ

**ಶಾಸ್ತ್ರೇಷು** = ಶಾಸ್ತ್ರಗಳಲ್ಲಿ

**ಪಾಂಡಿತೀ** = ವ್ಯಾಖ್ಯಾನ ಕೌಶಲವು

**(ದೃಷ್ಟಾ) ಚೇತ್** = ನೋಡಲ್ಪಟ್ಟರೆ

**ವಿಬುಧೇಶಿತುಃ** = ದೇವಾಧಿಪತಿಯಾದ ಇಂದ್ರನ

**ಆಚಾರ್ಯಃ** = ಗುರುಗಳಾದ ಬೃಹಸ್ಪತ್ಯಾಚಾರ್ಯರು

**ಆದರಾತ್** = ಪ್ರೀತ್ಯತಿಶಯದಿಂದ

**ವಿದ್ಯಾರ್ಥಿತಾಂ** = ಶಿಷ್ಯವೃತ್ತಿಯನ್ನು

**ಕಲಯತೇ** = ಬಯಸುತ್ತಾರೆ (ಹೊಂದುತ್ತಾರೆ.)

**ಔದಾರ್ಯಂ** = ದಾತೃತ್ವಸ್ವಭಾವವು

**(ದೃಷ್ಟಂ) ಯದಿ** = ನೊಡಲ್ಪಟ್ಟರೆ

**ಕಲ್ಪಪಾದಪಮುಖಾಃ** = ಕಲ್ಪವೃಕ್ಷ, ಮಂದಾರ, ಮುಂತಾದ ವೃಕ್ಷಗಳೂ, ಕಾಮಧೇನು, ಚಿಂತಾಮಣಿ, ಮುಂತಾದವುಗಳೂ

**ಅರ್ಥಿತಾಂ** = ಯಾಚಕತ್ವವನ್ನು

**ಸಂಭಾವಯಂತೇ** = ಆಲೋಚಿಸುತ್ತವೆ.

**ತಾತ್ಪರ್ಯ—** ತುಪ್ಪವು ಅತ್ಯಂತ ಮೃದುವಾದದ್ದು. ಆದರೆ ಶ್ರೀರಾಘವೇಂದ್ರಗುರುಗಳ ಶಿರೀಷ ಪುಷ್ಪದಂತೆ ಮೃದುವಾದ ಮನಸ್ಸಿನ ಕೋಮಲತೆಯನ್ನು ಒಂದು ಬಾರಿ ನೋಡಿದರೆ, ಹೊಸದಾದ ತುಪ್ಪವೂ ಶ್ರೀರಾಘವೇಂದ್ರ-ಗುರುಸಾರ್ವಭೌಮರ ಕೋಮಲವಾದ ಚಿತ್ತದ ದೃಷ್ಟಿಯಿಂದ ಕಲ್ಲೆಂದು ಕಾಣಿಸದಿರದು.

ಸಮುದ್ರವು ಅತ್ಯಂತ ಗಂಭೀರವೆಂದು ಪ್ರಸಿದ್ಧವಾಗಿದೆ. ಆದರೆ ನಮ್ಮ ಗುರುಗಳ ಗಾಂಭೀರ್ಯವನ್ನು ನೋಡಿ-ದರೆ ಅತಿಗಂಭೀರವಾದ ಸಮುದ್ರವೂ ಒಂದು ಬಾವಿಯಂತೆ ತೋರುತ್ತದೆ. ಗುರುರಾಜರ ಶಾಸ್ತ್ರಪಾಂಡಿತ್ಯವನ್ನು ಮನಸ್ಸಿನಲ್ಲಿ ಆಲೋಚಿಸಿದರೆ ದೇವೇಂದ್ರನ ಗುರುಗಳಾದ ಬೃಹಸ್ಪತ್ಯಾಚಾರ್ಯರೂ ಅವರ ಪಾಂಡಿತ್ಯದಲ್ಲಿ ಅತಿಶಯ ಪ್ರೀತ್ಯಾದರಗಳಿಂದ ಅವರ ಶಿಷ್ಯವೃತ್ತಿಯನ್ನೂ ಕೈಗೊಳ್ಳಬೇಕೆಂದು ಬಯಸುತ್ತಾರೆ. ಶ್ರೀರಾಘವೇಂದ್ರಯತಿರಾಜರ ಔದಾರ್ಯವನ್ನು ವಿಚಾರ ಮಾಡಿದಾಗ ಯಾಚಕರು ಕೇಳಿದ್ದನ್ನು ಕೊಡುವ, ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ , ಹರಿಚಂದನವೆಂಬ ಐದು ವೃಕ್ಷಗಳೂ ಕಾಮಧೇನು ಚಿಂತಾಮಣಿಗಳೂ ನಾವು ಶ್ರೀರಾಘವೇಂದ್ರಗುರು-ಗಳಲ್ಲಿ ಬೇಡಿ ನಮ್ಮ ಯಾಚಕರ ಅಭೀಷ್ಟಗಳನ್ನು ಪೂರೈಸಬೇಕೆಂದು ಬಯಸುತ್ತವೆ ಎಂದು ತೋರುತ್ತದೆ. ಹೀಗೆ ಶ್ರೀರಾಘವೇಂದ್ರಗುರುಸಾರ್ವಭೌಮರು ಮಾರ್ದವದಲ್ಲಿ ಹೊಸ ತುಪ್ಪವನ್ನು , ಗಾಂಭೀರ್ಯದಲ್ಲಿ ಸಮುದ್ರ-ವನ್ನೂ, ಶಾಸ್ತ್ರಪಾಂಡಿತ್ಯದಲ್ಲಿ ಬೃಹಸ್ಪತ್ಯಾಚಾರ್ಯರನ್ನೂ, ಔದಾರ್ಯದಲ್ಲಿ ಕಲ್ಪವೃಕ್ಷ , ಕಾಮಧೇನು, ಮೊದಲಾದ ದಿವ್ಯ ವಸ್ತುಗಳನ್ನೂ ಮೀರಿಸಿದ್ದಾರೆ ಎಂದು ಭಾವ. ನಮ್ಮ ಈ ಗುರುಸಾರ್ವಭೌಮರು ಅತ್ಯಂತ ದಯಾಳುಗಳು, ಅತಿಗಂಭೀರರು, ಮಹತ್ತಾದ ಶಾಸ್ತ್ರಪಾಂಡಿತ್ಯಪೂರ್ಣರು, ಮಹೌದಾರ್ಯಸಂಪನ್ನರು ಎಂದು ಕಾವ್ಯಶೈಲಿಯಿಂದ ವರ್ಣಿಸಿದ್ದಾರೆ.

**ವಿಗ್ರಹ —**

**ಮೃದುತಾ —** ಮೃದುನಃ ಭಾವಃ ಮೃದುತಾ ।

**ಶಿರೀಷಸದೃಶೇ —** ಶಿರೀಷೇಣ ಸದೃಶಂ ಶಿರೀಷಸದೃಶಂ, ತಸ್ಮಿನ್ ।

**ಗಾಂಭೀರ್ಯಂ —** ಗಂಭೀರಸ್ಯ ಭಾವಃ ಗಾಂಭೀರ್ಯಮ್ ।

**ಪಾಂಡಿತೇ —** ಪಂಡಿತಸ್ಯ ಭಾವಃ ಪಾಂಡಿತೀ (ಪಾಂಡಿತ್ಯಮ್) ।

**ವಿಬುಧೇಶಿತುಃ —** ವಿಬುಧಾನಾಂ ಈಶಿತಾ, ವಿಬುಧೇಶಿತಾ, ತಸ್ಯ ।

**ವಿದ್ಯಾರ್ಥಿತಾಂ —** ವಿದ್ಯಾಂ ಅರ್ಥಯತೇ ಇತಿ ವಿದ್ಯಾರ್ಥೀ, ವಿದ್ಯಾರ್ಥಿನಃ ಭಾವಃ ವಿದ್ಯಾರ್ಥಿತಾ, ತಾಮ್ ।

**ಔದಾರ್ಯಂ —** ಉದರಸ್ಯ ಭಾವಃ, ಔದಾರ್ಯಮ್ ।

**ಕಲ್ಪಪಾದಪಮುಖಾಃ —** ಕಲ್ಪ ಇತಿ ಪಾದಪಃ ಕಲ್ಪಪಾದಪಃ, ಸಃ ಮುಖಂ ಯೇಷಾಂ ತೇ ಕಲ್ಪ-ಪಾದಪಮುಖಾಃ ।

**ಅರ್ಥಿತಾಂ —** ಅರ್ಥಯತೇ ಇತಿ ಅರ್ಥೀ, ಅರ್ಥಿನಃ ಭಾವಃ ಅರ್ಥಿತಾ, ತಾಮ್ ।

**ವಿಶೇಷಾಂಶ —** ಹೈಯ್ಯಂಗವೀನಂ = ಹಿಂದಿನ ದಿವಸ ಕರೆದ ಹಾಲನ್ನು ಕಾಯಿಸಿ ಹೆಪ್ಪು ಹಾಕಿ ಮೊಸರು ಮಾಡಬೇಕು. ಅದನ್ನು ಕಡೆದು ತೆಗೆದ ಬೆಣ್ಣೆಯನ್ನು ಕಾಯಿಸಿ ಮಾಡಿದ ತುಪ್ಪವೇ ಹೈಯ್ಯಂಗವೀನ. 'ತತ್ತು ಹೈಯ್ಯಂಗವೀನಂ ಯದ್ಧ್ಯೋಗೋದೋಹೋದ್ಭವಂ ಘೃತಂ' ಅಮರ. 'ಹೈಯ್ಯಂಗವೀನಮಾದಾಯ ಘೋಷ-ವೃದ್ಧಾನುಪಸ್ಥಿತಾನ್' -ರಘುವಂಶ ಪ್ರ.ಸ. 'ಹೈಯ್ಯಂಗವೀನಂ ಸಂಜ್ಞಾಯಾಂ' ಎಂಬ ಪಾಣಿನಿ ಸೂತ್ರದಿಂದ (5-2-23) 'ಹ್ಯೋ ಗೋಹ ಶಬ್ದಕ್ಕೆ ಹಿಯಂಗು ಆದೇಶ ಬಂದು ವಿಕಾರಾರ್ಥದಲ್ಲಿ ಖಞ್ ಪ್ರತ್ಯಯ ಬಂದು ಅದಕ್ಕೆ 'ಈನ' ಆದೇಶ ಬಂದು ಆದಿವೃದ್ಧಿ ಬಂದಾಗ 'ಹೈಯ್ಯಂಗವೀನ' ಎಂದು ರೂಪವಾಗುತ್ತದೆ. ''ಪುಂಸ್ಯೇವಾಂಧುಃ ಪ್ರಹಿಃ ಕೂಪಃ ಉದಪಾನಂ ತು ಪುಂಸಿ ವಾ'' - ಅಮರ.

**ಕ್ರಿಯಾಪದ**— ಕಲಯತೇ ಈ ಕ್ರಿಯಾಪದವು ಕಲಯೇ ಕವನಂ ಕಿಂಚಿತ್ (ಶ್ಲೋಕ 16) ಎಂಬ ಪದ್ಯದಲ್ಲಿ ಬಂದಿದೆ. ಈ ಧಾತುವಿಗೆ ಅನೇಕ ಅರ್ಥಗಳಿವೆ. **ಸಂಭಾವಯಂತೇ** - ಸಂ ಉಪಸರ್ಗಪೂರ್ವಕಾತ್ ಭೂ ಸತ್ತಾಯಾಂ ಇತಿ ಸತ್ತಾರ್ಥಕಾತ್ ಭೂಧಾತೋಃ ಣಿಜಂತಾತ್ ಸಕರ್ಮಕಾತ್ ಆತ್ಮನೇಪದಿನಃ ವರ್ತಮಾನೇ ಲಟ್ ಪ್ರಥಮ-ಪುರುಷೇ ಬಹುವಚನೇ ಸಂಭಾವಯಂತೇ ಇತಿ ರೂಪಮ್ ।

ಸಂಭಾವಯತೇ, ಭಾವಯೇತೇ, ಭಾವಯಂತೇ ।
ಭಾವಯಸೇ, ಭಾವಯೇಥೇ, ಭಾವಯಧ್ವೇ ।
ಭಾವಯೇ, ಭಾವಯಾವಹೇ, ಭಾವಯಾಮಹೇ ।

**ಪ್ರಯೋಗ** — ವಿಬುಧೇಶಿತುಃ ಆಚಾರ್ಯಃ ವಿದ್ಯಾರ್ಥಿತಾಂ ಕಲಯತೇ (ಕರ್ತರಿ ಸಕರ್ಮಕ) ವಿಬು-ಧೇಶಿತುಃ ಆಚಾರ್ಯೇಣ ವಿದ್ಯಾರ್ಥಿತಾ ಕಲ್ಯತೇ । (ಕರ್ಮಣಿ).

ಕಲ್ಪಪಾದಪಮುಖಾಃ ಅರ್ಥಿತಾಂ ಸಂಭಾವಯಂತೇ । (ಸಕರ್ಮಕ ಕರ್ತರಿ ಪ್ರಯೋಗ).

ಕಲ್ಪಪಾದಪಮುಖ್ಯೈಃ ಅರ್ಥಿತಾ ಸಂಭಾವ್ಯತೇ । (ಕರ್ಮಣಿ).

**ಅಲಂಕಾರ** — ಇಲ್ಲಿ ತುಪ್ಪ ಮತ್ತು ರಾಯರ ಚಿತ್ತ ಮುಂತಾದ ಉಪಮಾನೋಪಮೇಯ ಭಾವವುಳ್ಳ ಎರಡೆರಡು ವಸ್ತುಗಳಲ್ಲಿ ಉಪಮೇಯ ವಸ್ತುಗಳಲ್ಲಿ ವಿಶೇಷವನ್ನು (ಆಧಿಕ್ಯವನ್ನು) ವರ್ಣಿಸಿದ್ದರಿಂದ ವ್ಯತಿರೇಕಾ-ಲಂಕಾರ.

ವ್ಯತಿರೇಕೋ ವಿಶೇಷೋಕ್ತಿರ್ಯಾ ಜಯೀಂದ್ರಸ್ತ್ವಲಾಂಛನಃ । - ಅಲಂಕಾರಮಂಜರೀ.



**ಅವತಾರಿಕಾ** — ದೇವಾನಾಮಿವ ದೇವೇಂದ್ರಃ ಎಂಬ 27 ನೆಯ ಶ್ಲೋಕದಿಂದ ಆರಂಭಿಸಿ ಕುಲಕವನ್ನು ಮುಗಿಸುತ್ತಾ ಈಗ ಕವಿಗಳು ಉಪಸಂಹಾರ ಮಾಡುತ್ತಿದ್ದಾರೆ —

**ತಸ್ಮಾನ್ಮಹಾಮಹಿಮ್ನೋಽಸ್ಮೈ ಮನಃ ಸ್ಪೃಹಯತೇ ಮಮ ।**
**ತದ್ಗೌರವೇಣ ಮತ್ಕಾವ್ಯಮಂಗೀಕುರ್ವಂತು ಸಜ್ಜನಾಃ ॥ 41 ॥**

**ಪದಚ್ಛೇದ** — ತಸ್ಮಾತ್, ಮಹಾಮಹಿಮ್ನೋ, ಅಸ್ಮೈ, ಮನಃ, ಸ್ಪೃಹಯತೇ, ಮಮ, ತದ್ಗೌರವೇಣ, ಮತ್ಕಾವ್ಯಂ, ಅಂಗೀಕುರ್ವಂತು, ಸಜ್ಜನಾಃ ।

**ಅನ್ವಯ** — ತಸ್ಮಾತ್ ಮಹಾಮಹಿಮ್ನೋ ಅಸ್ಮೈ ಮಮ ಮನಃ ಸ್ಪೃಹಯತೇ, ಸಜ್ಜನಾಃ ತದ್ಗೌರವೇಣ, ಮತ್ಕಾವ್ಯಂ ಅಂಗೀಕುರ್ವಂತು ।

**ಅನ್ವಯಾರ್ಥ** —

**ತಸ್ಮಾತ್** = ಹಿಂದೆ ಹೇಳಿದಂತಹ ಮಹಾಗುಣಗಳಿರುವುದರಿಂದ
**ಮಹಾಮಹಿಮ್ನೋ** = ಅತಿಶಯ ಮಹಿಮೋಪೇತರಾದ
**ಅಸ್ಮೈ** = ಈ ಗುರುಗಳಿಗೋಸ್ಕರ(ಇವರ ವಿಷಯದಲ್ಲಿ)
**ಮಮ** = ನನ್ನ

**ಮನಃ** = ಮನಸ್ಸು

**ಸ್ಪೃಹಯತೇ** = (ಸ್ತೋತ್ರ ಮಾಡಲು) ಬಯಸುತ್ತದೇ.

**ಸಜ್ಜನಾಃ** = ಸಾತ್ವಿಕ ಭಕ್ತ ಜನರು

**ತದ್ಗೌರವೇಣ** = ಆ ಗುರುಗಳ ಮೇಲಿನ ಆದರ ವಿಶೇಷದಿಂದ (ಗುರುಗಳ ಮಹಿಮೆಯ ಮೇಲಿನ ಅಭಿಮಾನದಿಂದ)

**ಮತ್ಕಾವ್ಯಂ** = ನನ್ನ ಕಾವ್ಯವನ್ನು

**ಅಂಗೀಕುರ್ವಂತು** = ಸ್ವೀಕರಿಸಲಿ.

**ತಾತ್ಪರ್ಯ** — ಹಿಂದೆ ಹೇಳಿದಂತೆ ನಮ್ಮ ಗುರುಗಳು ಮಹಾಮಹಿಮೋಪೇತರು. ಆದ್ದರಿಂದ ನನ್ನ ಮನಸ್ಸು ಅವರನ್ನು ಸ್ತೋತ್ರ ಮಾಡಲು ಬಯಸುತ್ತಿದೆ. ವಿಷ್ಣುಭಕ್ತರಾದ ಸಜ್ಜನರಿಗೆ ಗುರುಭಕ್ತಿಯ ಮೂಲಕ ಹರಿಭಕ್ತಿಗೆ ಕಾರಣವಾದ ಗುರುಮಹಿಮೆಯನ್ನು ವರ್ಣಿಸುವ ಈ ಕಾವ್ಯವನ್ನು ಗುರುಗಳ ಮಹತ್ತ್ವದ ದೃಷ್ಟಿಯಿಂದಲೂ ಗುರುಗಳ ಗುರುಗುಣಗಳ ಮೇಲಿನ ಗೌರವದಿಂದಲೂ ಸಜ್ಜನರು ಸ್ವೀಕರಿಸಬೇಕು. ಅಧ್ಯಯನ ಅಧ್ಯಾಪನಾದಿಗಳಿಂದ ಪ್ರಚಾರ ಮಾಡಬೇಕು ಎಂದು ಕವಿಗಳು ಹಾರೈಸುತ್ತಿದ್ದಾರೆ.

**ವಿಗ್ರಹ** —

**ಮಹಾಮಹಿಮ್ನೇ** — ಮಹಾನ್ ಮಹಿಮಾ ಯಸ್ಯ ಸಃ ಮಹಾಮಹಿಮಾ, ತಸ್ಮೈ ಮಹಾಮಹಿಮ್ನೇ।

**ತದ್ಗೌರವೇಣ** — ಗುರೋಃ ಭಾವಃ ಗೌರವಂ, ತಸ್ಮಿನ್ ಗೌರವಂ ತದ್ಗೌರವಂ, ತೇನ।

**ಮತ್ಕಾವ್ಯಂ** — ಮಮ ಕಾವ್ಯಂ ಮತ್ಕಾವ್ಯಮ್।

**ಸಜ್ಜನಾಃ** — ಸಂತಶ್ಚ ತೇ ಜನಾಶ್ಚ ಸಜ್ಜನಾಃ।

**ಕ್ರಿಯಾಪದ** — ಸ್ಪೃಹಯತೇ - ಸ್ಪೃಹ ಈಪ್ಸಾಯಾಂ ಇತಿ ಈಪ್ಸಾರ್ಥಕಾತ್ ಸ್ಪೃಹ ಧಾತೋಃ ಅಕರ್ಮಕಾತ್ ಆತ್ಮನೇಪದಿನಃ ವರ್ತಮಾನೇ ಲಟ್ ಪ್ರ. ಪು. ಏ. ।

| | | |
|---|---|---|
| ಸ್ಪೃಹಯತೇ, | ಸ್ಪೃಹಯೇತೇ, | ಸ್ಪೃಹಯಂತೇ । |
| ಸ್ಪೃಹಯಸೇ, | ಸ್ಪೃಹಯೇಥೇ, | ಸ್ಪೃಹಯಧ್ವೇ। |
| ಸ್ಪೃಹಯೇ, | ಸ್ಪೃಹಯಾವಹೇ, | ಸ್ಪೃಹಯಾಮಹೇ । |

ಅಂಗೀಕುರ್ವಂತು - ಅಂಗ ಉಪಪದಾತ್ 'ಡುಕೃಞ್ ಕರಣೇ' ಇತಿ ಕರಣಾರ್ಥಕಾತ್ ಕೃಧಾತೋಃ ಪರಸ್ಮೈಪದಿನಃ ಸಕರ್ಮಕಾತ್ ಕರ್ತರಿ ಆಜ್ಞಾಯಾಂ ಲೋಟ್ ಪ್ರ. ಪು. ಬಹುವಚನಮ್ ।

| | | | |
|---|---|---|---|
| ಅಂಗೀ+ಕರೋತು, | ಕುರುತಾತ್, | ಕುರುತಾಂ, | ಕುರ್ವಂತು । |
| | ಕುರು, | ಕುರುತಾತ್, | ಕುರುತಂ, ಕುರುತ । |
| | ಕರವಾಣಿ, | ಕರವಾವ, | ಕರವಾಮ । |

**ವಿಶೇಷಾಂಶ** — ಚರಿತಂ ವೈಷ್ಣವಾನಾಂ ಭಕ್ತ್ಯುದ್ರೇಕಾಯ ಕಥ್ಯತೇ (ನಿರ್ಣಯೋದಾಹೃತವಾಕ್ಯೇ) ವಿಷ್ಣುಚರಿತೆಯಲ್ಲಿ ವೈಷ್ಣವರ ಚರಿತೆಯನ್ನು ಪರಮಾತ್ಮನು ತನ್ನ ಭಕ್ತರನ್ನು ಕಾಪಾಡುತ್ತಿರುವ ಮಹಿಮೆಯನ್ನು ತಿಳಿಸಿ ವಿಷ್ಣುಭಕ್ತಿಯ ಅತಿಶಯವನ್ನುಂಟು ಮಾಡುವುದಕ್ಕಾಗಿ ಹೇಳುತ್ತಾರೆ ಎಂಬಂತೆ ವಿಷ್ಣುಭಕ್ತರಾದ ಸಾತ್ವಿಕ ಭಕ್ತರಿಗೆ

ವಿಷ್ಣು- ಮಹಿಮೆಯಂತೆಯೇ ವಿಷ್ಣುಭಕ್ತರ ಮಹಿಮೆಯೂ ಪ್ರಿಯವಾದುದರಿಂದ ಇಲ್ಲಿ ಹೇಳಿರುವ ವಿಷ್ಣುಭಕ್ತಾಗ್ರೇಸರರಾದ ಪ್ರಹ್ಲಾದಾಂಶರಾದ ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರ ಚರಿತೆಯು ಸಜ್ಜನರಿಗೆ ಗ್ರಾಹ್ಯವಾಗಿದೆ.

ಮತ್ತು ಹಿಂದೆ ''ಗುರ್ವಂತರ್ಯಾಮಿ ಭಗವತ್ ಸ್ತುತಿ ಗಂಗಾಂಬುಮಜ್ಜನಾತ್'' (ರಾ.ವಿ. ಪ್ರ.ಸರ್ಗ, ಶ್ಲೋ. 15) ಎಂದು ಹೇಳಿದ್ದಾರೆ. ಈ ಕಾವ್ಯವು ಗುರುಗಳಲ್ಲಿ ಅಂತರ್ಯಾಮಿಯಾಗಿರುವ ಭಗವಂತನ ಸ್ತುತಿ ರೂಪವಾಗಿದೆ ಎಂದು ಅದರ ಅಭಿಪ್ರಾಯ. ಈ ಕಾರಣದಿಂದ ಭಗವಂತನ ಸ್ತುತಿ ರೂಪವಾದ ಈ ಕಾವ್ಯವು ಸಜ್ಜನರಿಗೆ ಗ್ರಾಹ್ಯವಾಗಿದೆ ಎಂದು ತಿಳಿಯಬೇಕು.

**ಪ್ರಯೋಗ —** ಮಮ ಮನಃ ಅಸ್ಮೈ ಮಹಾಮಹಿಮ್ನೇ ಸ್ಪೃಹಯತೇ । (ಅಕರ್ಮಕ ಕರ್ತರಿ ಪ್ರಯೋಗ).
ಮಮ ಮನಸಾ ಅಸ್ಮೈ ಮಹಾಮಹಿಮ್ನೇ ಸ್ಪೃಹ್ಯತೇ । (ಭಾವೇ).
ಸಜ್ಜನಾಃ ಮತ್ಕಾವ್ಯಂ ಅಂಗೀಕುರ್ವಂತು । (ಸಕರ್ಮಕಾತ್ ಕರ್ತರಿ).
ಸಜ್ಜನಾಃ ಮತ್ಕಾವ್ಯಂ ಅಂಗೀಕ್ರಿಯತಾಮ್ । (ಕರ್ಮಣಿ).

**ವ್ಯಾಕರಣವಿಶೇಷ —** ''ಅಸ್ಮೈ ಮಹಾಮಹಿಮ್ನೇ ಮನಃ ಸ್ಪೃಹಯತೇ'' ಎಂಬಲ್ಲಿ 'ಸ್ಪೃಹೇರೀಪ್ಸಿತಃ' (1-4-36) ಎಂಬ ಸೂತ್ರದಿಂದ ಸ್ಪೃಹಧಾತುವಿನ ಪ್ರಯೋಗ ಮಾಡಿದಾಗ ಇಚ್ಛೆಗೆ ವಿಷಯವಾದ ವಸ್ತುವಿಗೆ ಸಂಪ್ರದಾನ ಸಂಜ್ಞೆ ಬರುತ್ತದೆ. 'ಚತುರ್ಥೀ ಸಂಪ್ರದಾನೇ' ಎಂಬ ಸೂತ್ರದಿಂದ ಚತುರ್ಥೀ ವಿಭಕ್ತಿ ಬರುತ್ತದೆ.

'ಅನಂಗಂ ಅಂಗಂ ಸಂಪದ್ಯಮಾನಂ ಕುರ್ವಂತು ಅಂಗೀಕುರ್ವಂತು, ಕೃಭ್ವಸ್ತಿಯೋಗೇ ಸಂಪದ್ಯಮಾನಕರ್ತರಿ ಚ್ವಿ' (5-4-50) ಸೂತ್ರದಿಂದ ''ಅಭೂತತದ್ಭಾವ ಇತಿ ವಕ್ತವ್ಯಂ'' ಎಂಬ ವಾರ್ತಿಕದಿಂದಲೂ ಅಂದರೆ ''ಹಿಂದೆ ಹಾಗಿಲ್ಲದ್ದು ಈಗ ಹಾಗಾಯಿತು'' ಎಂಬ ಅರ್ಥದಲ್ಲಿ ಕೃ, ಭೂ, ಅಸ್ ಧಾತುಗಳ ಯೋಗವಿದ್ದಾಗ 'ಚ್ವಿ'ಪ್ರತ್ಯಯ ಬಂದು ಸರ್ವ- ಲೋಪವಾಗಿ 'ಅಸ್ಯ ಚ್ವೌ' (7-4-32) ಎಂಬ ಸೂತ್ರದಿಂದ ಅಕಾರಕ್ಕೆ ಈಕಾರ ಬಂದಿದೆ.

'ದೇವಾನಾಮಿವ ದೇವೇಂದ್ರೋ ಯೋ ದತ್ತ ಇವ ಯೋಗಿನಾಂ' (27 ಶ್ಲೋ.) ಎಂಬ ಶ್ಲೋಕದಿಂದ ಆರಂಭಿಸಿ ಯದ್ ಶಬ್ದದಿಂದ ಪ್ರಸಕ್ತರಾದ ಶ್ರೀರಾಘವೇಂದ್ರಗುರುಗಳನ್ನು ಈ ಶ್ಲೋಕದಲ್ಲಿ 'ಅಸ್ಮೈ'ಎಂದು ಇದಂ ಶಬ್ದದಿಂದ ಪರಾಮರ್ಶ ಮಾಡಿದ್ದಾರೆ. ಸಾಮಾನ್ಯವಾಗಿ ಯಚ್ಛಬ್ದದಿಂದ ಆರಂಭಿಸಿದ್ದನ್ನು ತಚ್ಛಬ್ದದಿಂದಲೇ ಪುನಃ ಉಪಸಂಹಾರ- ದಲ್ಲಿ ಹೇಳುವುದು ಕಂಡಿದೆ.

'ಯಸ್ಯ ಜ್ಞಾನದಯಾಸಿಂಧೋರಗಾಧಸ್ಯಾನಘಾ ಗುಣಾಃ ।
ಸೇವ್ಯತಾಮಕ್ಷಯೋ ಧೀರಾಃ ಸ ಶ್ರಿಯೇ ಚಾಮೃತಾಯ ಚ ॥'

ಎಂಬಲ್ಲಿ ಯಸ್ಯ ಎಂದು ಪ್ರಾರಂಭಿಸಿದನ್ನು ಸಃ ಎಂದು ಕೊನೆಯಲ್ಲಿ ಹೇಳಿದ್ದಾರೆ. ಹಾಗೆಯೇ ಇಲ್ಲಿಯೂ 'ಅಸ್ಮೈ' ಎಂಬುದರ ಬದಲಾಗಿ 'ತಸ್ಮೈ'ಎಂದು ಹೇಳಬೇಕಾಗಿತ್ತು ಎಂಬ ಸಂದೇಹವು ಬರುತ್ತದೆ. ಆದರೆ ಲೋಕದಲ್ಲಿ ಯತ್ ತತ್ ಶಬ್ದಗಳಿಗೆ ಸಂಬಂಧವಿದ್ದಹಾಗೆ ಯದ್ ಇದಂ ಶಬ್ದಗಳಿಗೂ ಪರಸ್ಪರ 'ನಿರ್ದೇಶ ಪ್ರತಿನಿರ್ದೇಶ' ಭಾವದಿಂದ ಪ್ರಯೋಗವು ಕಂಡಿದೆ.

ಶ್ರೀಮಧ್ವಸಂಸೇವನಲಬ್ಧಶುದ್ಧವಿದ್ಯಾಸುಧಾಂಭೋನಿಧಯೋಽಮಲಾ ಯೇ ।
ಕೃಪಾಲವಃ ಪಂಕಜನಾಭತೀರ್ಥಾಃ ಕೃಪಾಲವಃ ಸ್ಯಾನ್ಮಯಿ ನಿತ್ಯಮೇಷಾಮ್ ॥
—(*'ತತ್ತ್ವಪ್ರಕಾಶಿಕಾ' ಶ್ರೀಜಯತೀರ್ಥೀಯ ಟೀಕಾ ಮಂಗಲಪದ್ಯಮ್*)

ಈ ಪದ್ಯದಲ್ಲಿ 'ಯೇ' ಎಂದು ಯಚ್ಛಬ್ದದಿಂದ ಪ್ರಸಕ್ತರಾದ ಪದ್ಮನಾಭತೀರ್ಥರನ್ನು 'ಏಷಾಂ' ಎಂದು ಇದಂ ಶಬ್ದದ ಷಷ್ಠೀ ಬಹುವಚನದಿಂದ ಪರಾಮರ್ಶ ಮಾಡಿದ್ದಾರೆ. ಆದ್ದರಿಂದ ಇಲ್ಲಿ 'ಯೋ ದತ್ತ ಇವ ಯೋಗಿನಾಂ' ಇತ್ಯಾದಿಗಳಲ್ಲಿ ಯಚ್ಛಬ್ದದಿಂದ ಪರಾಮರ್ಶ ಮಾಡಿದ್ದನ್ನು 'ಅಸ್ಮೈ' ಎಂದು ಇದಂ ಶಬ್ದದಿಂದ ಪರಾಮರ್ಶ ಮಾಡಿ-ರುವುದು ಅಯುಕ್ತವೆಂದು ಹೇಳುವಂತಿಲ್ಲ.



**ಅವತಾರಿಕಾ —** ಕವಿಗಳು ಸರ್ಗದ ಕೊನೆಯಲ್ಲಿ ಭಿನ್ನವೃತ್ತದಿಂದ ಸಮಾಪ್ತಿ ಮಾಡಬೇಕೆಂದು ಸಂಪ್ರದಾಯ-ವಿರುವುದರಿಂದ ಈಗ ಬೇರೆ ವೃತ್ತದ ಪದ್ಯದಿಂದ ಸರ್ಗಸಮಾಪ್ತಿಯನ್ನು ಮಾಡುತ್ತಾರೆ —

**ಶ್ರೀಮತ್ಕಶ್ಯಪವಂಶವಾರ್ಧಿಶಶಿನಃ ಷಡ್‌ದರ್ಶನೀವಲ್ಲಭ-**
**ಶ್ರೀಲಕ್ಷ್ಮೀನರಸಿಂಹವಿತ್ತವಿದುಷಃ ಶ್ರೀವೇಂಕಟಾಂಬಾಮಣೇಃ(ಣೌ) ।**
**ಜಾತೇನಾರ್ಯದಯಾಸುಧಾಮಯಗಿರಾ ನಾರಾಯಣೇನೋದಿತೇ**
**ಕಾವ್ಯೇ ಚಾರುಣಿ ರಾಘವೇಂದ್ರವಿಜಯೇ ಸರ್ಗೋ ವಿಭಾತ್ಯಾದಿಮಃ ॥ 44 ॥**

**ಪದಚ್ಛೇದ—** ಶ್ರೀಮತ್ಕಶ್ಯಪವಂಶವಾರ್ಧಿಶಶಿನಃ, ಷಡ್‌ದರ್ಶನೀವಲ್ಲಭಃ, ಶ್ರೀಲಕ್ಷ್ಮೀನರಸಿಂಹವಿತ್ತ-ವಿದುಷಃ, ಶ್ರೀವೇಂಕಟಾಂಬಾಮಣೇಃ, ಜಾತೇನ, ಆರ್ಯದಯಾಸುಧಾಮಯಾಗಿರಾ, ನಾರಾಯಣೇನ, ಉದಿತೇ, ಕಾವ್ಯೇ, ಚಾರುಣಿ, ರಾಘವೇಂದ್ರವಿಜಯೇ, ಸರ್ಗಃ, ವಿಭಾತಿ, ಆದಿಮಃ ।

**ಅನ್ವಯ—** ಶ್ರೀಮತ್ಕಶ್ಯಪವಂಶವಾರ್ಧಿಶಶಿನಃ ಷಡ್‌ದರ್ಶನೀವಲ್ಲಭಃ ಶ್ರೀಲಕ್ಷ್ಮೀನರಸಿಂಹವಿತ್ತವಿದುಷಃ, ಶ್ರೀವೇಂಕಟಾಂಬಾಮಣೇಃ ಜಾತೇನ ಆರ್ಯದಯಾಸುಧಾಮಯಾಗಿರಾ, ನಾರಾಯಣೇನ ಉದಿತೇ ಕಾವ್ಯೇ ಚಾರುಣಿ ರಾಘವೇಂದ್ರವಿಜಯೇ ಸರ್ಗಃ ಆದಿಮಃ ವಿಭಾತಿ ।

**ಅನ್ವಯಾರ್ಥ—**

**ಶ್ರೀಮತ್ಕಶ್ಯಪವಂಶವಾರ್ಧಿಶಶಿನಃ — ಶ್ರೀಮತ್** = ಜ್ಞಾನಾದಿಗುಣಭರಿತರಾದ, **ಕಶ್ಯಪ** = ಕಶ್ಯಪ ಮುನಿಗಳ, **ವಂಶ** = ಗೋತ್ರವೆಂಬ, **ವಾರ್ಧಿ** = ಸಮುದ್ರದ, **ಶಶಿನಃ** = ಚಂದ್ರಸಮಾನರಾದ (ಕಶ್ಯಪ ಗೋತ್ರದಲ್ಲಿ ಹುಟ್ಟಿದ)

**ಷಡ್‌ದರ್ಶನೀವಲ್ಲಭಶ್ರೀಲಕ್ಷ್ಮೀನರಸಿಂಹವಿತ್ತವಿದುಷಃ — ಷಡ್‌ದರ್ಶನೀ** = ಆರು ದರ್ಶನಗಳಲ್ಲಿ, **ವಲ್ಲಭ** = ಪರಿಣತರಾದ, **ಶ್ರೀ** = ಕಾಂತಿಯುಕ್ತರಾದ, **ಲಕ್ಷ್ಮೀನರಸಿಂಹ** = ಲಕ್ಷ್ಮೀನರಸಿಂಹಾ-ಚಾರ್ಯರೆಂಬ, **ವಿತ್ತ** = ಪ್ರಸಿದ್ಧರಾದ, **ವಿದುಷಃ** = ವಿದ್ವಾಂಸರಿಂದ

**ಶ್ರೀವೇಂಕಟಾಂಬಾಮಣೇಃ(ಣೌ) — ಶ್ರೀ** = ಕಾಂತಿಯುಕ್ತಳಾದ, **ವೇಂಕಟಾ** = ವೆಂಕಟಾಂಬಾ ಎಂಬ, **ಅಂಬಾಮಣೇಃ(ಣೌ)** = ಶ್ರೇಷ್ಠಳಾದ ತಾಯಿಯ ದೆಸೆಯಿಂದ (ಶ್ರೇಷ್ಠಳಾದ ತಾಯಿಯಲ್ಲಿ)

**ಜಾತೇನ** = ಹುಟ್ಟಿದ

**ಆರ್ಯದಯಾಸುಧಾಮಯಗಿರಾ — ಆರ್ಯ** = ಶ್ರೇಷ್ಠರಾದ ಲಕ್ಷ್ಮೀನರಸಿಂಹಾಚಾರ್ಯರೆಂಬ ತಂದೆಯವರ, **ದಯಾ** = ದಯೆಯಿಂದ, **ಸುಧಾಮಯ** = ಅಮೃತ ಸಮಾನವಾದ, **ಗಿರಾ** = ಮಾತುಗಳುಳ್ಳ

**ನಾರಾಯಣೇನ** = ನಾರಾಯಣಾಚಾರ್ಯನೆಂಬ ಪಂಡಿತನಿಂದ

**ಉದಿತೇ** = ಉದಯಿಸಿದ (ರಚಿತವಾದ)

**ಚಾರುಣಿ** = ಮನೋಹರವಾದ

**ರಾಘವೇಂದ್ರವಿಜಯೇ** = ಶ್ರೀರಾಘವೇಂದ್ರವಿಜಯವೆಂಬ

**ಕಾವ್ಯೇ** = ಕಾವ್ಯದಲ್ಲಿ

**ಆದಿಮಃ** = ಮೊದಲನೆಯ

**ಸರ್ಗಃ** = ಸರ್ಗವು

**ವಿಭಾತಿ** = ಶೋಭಿಸುತ್ತದೆ.

**ತಾತ್ಪರ್ಯ—** ಜ್ಞಾನಾದಿಗುಣಸಂಪನ್ನರಾದ ಕಶ್ಯಪರ ಗೋತ್ರವೆಂಬ ಸಮುದ್ರದಲ್ಲಿ ಚಂದ್ರನಂತೆ ಲಕ್ಷ್ಮೀನರಸಿಂಹಾಚಾರ್ಯರೆಂಬ ಪ್ರಸಿದ್ಧರಾದ ವಿದ್ವಾಂಸರು ಇದ್ದರು. ಆರು ದರ್ಶನಗಳಲ್ಲಿಯೂ ಪ್ರಸಿದ್ಧ ವಿದ್ವಾಂಸರಾದ ಅವರಿಗೆ ವೆಂಕಟಾಬಾ ಎಂಬ ಧರ್ಮಪತ್ನಿಯಿದ್ದಳು. ಈ ದಂಪತಿಗಳಿಗೆ ಪುತ್ರನಾಗಿ ನಾರಾಯಣಾಚಾರ್ಯರು ಹುಟ್ಟಿದರು. ತಂದೆಯಿಂದಲೇ ಎಲ್ಲಾ ವಿದ್ಯಾಭ್ಯಾಸವನ್ನು ಮಾಡಿದ ನಾರಾಯಣ ಕವಿಯು ತಂದೆಯ ದಯೆಯಿಂದಲೇ ಅಮೃತದಂತಿರುವ ಮಾತುಗಳಿಂದ ಮನೋಹರವಾದ ಶ್ರೀರಾಘವೇಂದ್ರವಿಜಯವೆಂಬ ಮಹಾಕಾವ್ಯವನ್ನು ರಚಿಸಿದನು. ಆ ಕಾವ್ಯದಲ್ಲಿ ಇಲ್ಲಿಗೆ ಮೊದಲನೆಯ ಸರ್ಗವು ಸಮಾಪ್ತಿಯಾಗಿ ವಿದ್ವಾಂಸರ ಮತ್ತು ಸಹೃದಯ ಭಕ್ತರ ಎದುರು ಶೋಭಿಸುತ್ತಿದೆ.

**ವಿಗ್ರಹ—**

**ಶ್ರೀಮತ್ಕಶ್ಯಪವಂಶವಾರ್ಧಿಶಶಿನಃ —** ಶ್ರೀಃ ಅಸ್ಯ ಅಸ್ತೀತಿ ಶ್ರೀಮಾನ್, ಕಶ್ಯಪಸ್ಯ ವಂಶಃ ಕಶ್ಯಪವಂಶಃ, ಶ್ರೀಮಾಂಶ್ಚಾಸೌ ಕಶ್ಯಪವಂಶಶ್ಚ ಶ್ರೀಮತ್ಕಶ್ಯಪವಂಶಃ, ಶ್ರೀಮತ್ಕಶ್ಯಪವಂಶ ಏವ ವಾರ್ಧಿಃ ಶ್ರೀಮತ್ಕಶ್ಯಪವಂಶವಾರ್ಧಿಃ, ವಾರಿ (ಬಹು) ಧೀಯಂತೇ ಅಸ್ಮಿನ್ನಿತಿ ವಾರ್ಧಿಃ, ಶ್ರೀಮತ್ಕಶ್ಯಪವಂಶವಾರ್ಧೌ ಶಶೀ ಶ್ರೀಮತ್ಕಶ್ಯಪವಂಶವಾರ್ಧಿಶಶೀ, ತಸ್ಯ।

**ಷಡ್ದರ್ಶನೀವಲ್ಲಭಶ್ರೀಲಕ್ಷ್ಮೀನರಸಿಂಹವಿತ್ತವಿದುಷಃ —** ಷಣ್ಣಾಂ ದರ್ಶನಾನಾಂ ಸಮಾಹಾರಃ ಷಡ್ದರ್ಶನೀ, ಷಡ್ದರ್ಶನ್ಯಾಃ ವಲ್ಲಭಃ ಷಡ್ದರ್ಶನೀವಲ್ಲಭಃ, ಶ್ರೀಯುಕ್ತಶ್ಚಾಸೌ ಲಕ್ಷ್ಮೀನರಸಿಂಹಶ್ಚ ಶ್ರೀಲಕ್ಷ್ಮೀನರಸಿಂಹಃ, ವಿತ್ತಶ್ಚಾಸೌ ವಿದ್ವಾಂಶ್ಚ ವಿತ್ತವಿದ್ವಾನ್, ಶ್ರೀಲಕ್ಷ್ಮೀನರಸಿಂಹಶ್ಚಾಸೌ ವಿತ್ತವಿದ್ವಾಂಸಶ್ಚಶ್ರೀಲಕ್ಷ್ಮೀನರಸಿಂಹವಿತ್ತವಿದ್ವಾನ್, ಷಡ್ದರ್ಶನೀವಲ್ಲಭಶ್ಚಾಸೌ ಶ್ರೀಲಕ್ಷ್ಮೀನರಸಿಂಹವಿತ್ತವಿದ್ವಾಂಸಶ್ಚಷಡ್ದರ್ಶನೀವಲ್ಲಭಶ್ರೀಲಕ್ಷ್ಮೀನರಸಿಂಹವಿತ್ತವಿದ್ವಾನ್, ತಸ್ಯ।

**ಶ್ರೀವೇಂಕಟಾಂಬಾಮಣೇಃ —** ಅಂಬಾನಾಂ ಮಣಿಃ ಅಂಬಾಮಣಿಃ, ವೇಂಕಟಾಂಬಾ ಇತಿ ಅಂಬಾಮಣಿಃ ವೇಂಕಟಾಂಬಾಮಣಿಃ, ಶ್ರೀಯುಕ್ತಾ ಚ ಸಾ ವೇಂಕಟಾಂಬಾಮಣಿಶ್ಚ ಶ್ರೀವೇಂಕಟಾಂಬಾಮಣಿಃ, ತಸ್ಯಾಃ।

**ಆರ್ಯದಯಾಸುಧಾಮಯಗಿರಾ** — ಆರ್ಯಾಣಾಂ ದಯಾ ಆರ್ಯದಯಾ, ಆರ್ಯದಯಾ ಸುಧಾಮಮೀ ಸುಧಾಮಯ್ಯಃ ಗೀಃ ಯಸ್ಯ ಸಃ ಆರ್ಯದಯಾಸುಧಾಮಯಗೀಃ ತೇನ ಆರ್ಯದಯಾಸುಧಾಮಯಗಿರಾ ।

**ರಾಘವೇಂದ್ರವಿಜಯೇ** — ರಾಘವೇಂದ್ರಸ್ಯ ವಿಜಯಃ ಯಸ್ಮಿನ್ ತತ್ ರಾಘವೇಂದ್ರವಿಜಯಂ, ತಸ್ಮಿನ್ ।

**ಆದಿಮಃ** - ಆದೌ ಭವಃ ಆದಿಮಃ ।

**ಕ್ರಿಯಾಪದ —**

ವಿಭಾತಿ - ವಿ+ಭಾತಿ , ಭಾತಃ , ಭಾಂತಿ, ಇತ್ಯಾದಿ ವಾಣೀಪಾಣಿತಲಾಸಕ್ತ ಎಂಬ ಪ್ರಥಮ ಸರ್ಗದ ಆರನೆಯ ಶ್ಲೋಕದಲ್ಲಿ ಈ ಕ್ರಿಯಾಪದ ಬಂದಿದೆ.

**ವಿಶೇಷಾಂಶ —** ಕಶ್ಯಪಗೋತ್ರದ ಲಕ್ಷ್ಮೀನರಸಿಂಹಾಚಾರ್ಯರು ಮತ್ತು ವೇಂಕಟಾಂಬಾ ಎಂಬ ದಂಪತಿಗಳೇ ಈ ಕಾವ್ಯನಿರ್ಮಾತೃಗಳಾದ ನಾರಾಯಣಾಚಾರ್ಯರ ತಂದೆ-ತಾಯಿಗಳು. ತಂದೆಯಿಂದಲೇ ವಿದ್ಯಾಭ್ಯಾಸ ಮಾಡಿ ಅವರ ದಯೆಯಿಂದ ಒಳ್ಳೆಯ ವ್ಯುತ್ಪತ್ತಿಯನ್ನು ಸಂಪಾದಿಸಿ, ಪಂಡಿತರಾದ ಕವಿ ನಾರಾಯಣಾಚಾರ್ಯರು ಶ್ರೀ-ರಾಘವೇಂದ್ರವಿಜಯವೆಂಬ ಮಹಾಕಾವ್ಯವನ್ನು ಬರೆದಿದ್ದಾರೆ. ಹೀಗೆ ಕವಿಗಳು ತಮ್ಮ ವಂಶ ವಿಚಾರ ಹೇಳಿಕೊಳ್ಳು-ವುದು ಪರಂಪರೆಯಿಂದ ಬಂದಿದೆ. ಆದರಿಂದ ಅವರ ಕೀರ್ತಿಯು ಕಾವ್ಯ ಇರುವವರೆಗೂ ಸ್ಥಾಯಿಯಾಗಿರುತ್ತದೆ.

**ಪ್ರಯೋಗ—** ಆದಿಮಃ ಸರ್ಗಃ ವಿಭಾತಿ । (ಅಕರ್ಮಕ ಕರ್ತರಿ)
ಆದಿಮೇನ ಸರ್ಗೇಣ ವಿಭಾಯತೇ । (ಭಾವೇ)

**ಷಡ್ದರ್ಶನಗಳು** — ನ್ಯಾಯ, ವೈಶೇಷಿಕ, ಸಾಂಖ್ಯ, ಪಾಂತಜಲ, ಪೂರ್ವಮೀಮಾಂಸಾ, ಉತ್ತರ ಮೀಮಾಂಸಾ ಈ ಆರು ಶಾಸ್ತ್ರಗಳನ್ನು ಷಡ್ದರ್ಶನಗಳೆಂದು ಹೇಳುತ್ತಾರೆ.

**ಅಲಂಕಾರ —** ಇಲ್ಲಿ ಕಶ್ಯಪವಂಶವೇ ಸಮುದ್ರ, ಅಲ್ಲಿ ಹುಟ್ಟಿದ ಲಕ್ಷ್ಮೀನರಸಿಂಹಾಚಾರ್ಯರು ಚಂದ್ರ ಎಂದು ಉಪಮಾನೋಪಮೇಯಗಳಿಗೆ ಅಭೇದವನ್ನು ವರ್ಣಿಸಿರುವುದರಿಂದ ರೂಪಕಾಲಂಕಾರ. ''ವಿಷಯ್ಯಭೇದ-ತಾದ್ರೂಪ್ಯರಂಜನಂ ವಿಷಯಸ್ಯ ಯತ್ ರೂಪಕಂ ತತ್'' ಎಂದು ಅದರ ಲಕ್ಷಣ. (ಚಂದ್ರಾಲೋಕ)

*(ದೇಶಿಕ ಗೋಪಾಲಕೃಷ್ಣಾಚಾರ್ಯರಿಂದ ವಿದ್ಯಾಭ್ಯಾಸ ಮಾಡಿರುವ ಶ್ರೀರಾಮಾಚಾರ್ಯರ ಬಾಲಬೋಧಿನೀ ಎಂಬ ವ್ಯಾಖ್ಯಾನವನ್ನೂ ನ್ಯಾಯಾಲಯ ರಾಘವೇಂದ್ರಾಚಾರ್ಯರು ಮಾಡಿರುವ ಗುರುಪಾದಸೇವಾ ವ್ಯಾಖ್ಯಾನವನ್ನೂ ಅನುಸರಿಸಿ ಈ ಅನುವಾದವು ರಚಿತವಾಗಿದೆ.)*

*ಇಲ್ಲಿಗೆ ಶ್ರೀನಾರಾಯಣಾಚಾರ್ಯರಿಂದ ರಚಿತವಾದ ಶ್ರೀರಾಘವೇಂದ್ರವಿಜಯ ಮಹಾಕಾವ್ಯದ ಮೊದನೆಯ ಸರ್ಗದ ಕನ್ನಡ ಭಾಷಾನುವಾದವು ಸಮಾಪ್ತವಾಯಿತು.*





ಮಹಾಮಹೋಪಾಧ್ಯಾಯ, ಪಂಡಿತಭೂಷಣಂ, ವೇದಸಿಂಧು, ಶಾಸ್ತ್ರರತ್ನಾಕರ,
ಮಧ್ವರತ್ನಾಕರ, ತರ್ಕಕೋವಿದ, ಸಚ್ಛಾಸ್ತ್ರಪ್ರವಚನರತ್ನ, ಆಗಮಪ್ರವೀಣ
ವಿದ್ಯಾಮಾನ್ಯ ಹಾಗೂ ರಾಘವೇಂದ್ರಾನುಗ್ರಹ ಪ್ರಶಸ್ತಿ ಪುರಸ್ಕೃತ

## ವಿದ್ವಾನ್ ಶ್ರೀ ಎಸ್.ವಿ. ಭೀಮಭಟ್ಟರು

ಸಂಸ್ಕೃತಭಾಷಾಭಿಜ್ಞರಿಗೆ ಚಿರಪರಿಚಿತರಾದ ಶ್ರೀ ಎಸ್. ವಿ. ಭೀಮಭಟ್ಟರು ಮೂಲತಃ ಉಡುಪಿಯವರು. ಬೆಂಗಳೂರಿನ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನ ವೇದಾಂತವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದ ಇವರು ಸಂಸ್ಕೃತಭಾಷೆಯ ಅನೇಕ ಗ್ರಂಥಗಳನ್ನು, ಕಾವ್ಯಗಳನ್ನು ಕನ್ನಡದಲ್ಲಿ ಅನುವಾದಿಸಿ ಅಧ್ಯೇತೃಗಳಿಗೆ ಉತ್ತಮ ಉಪಕಾರವನ್ನು ಮಾಡಿರುತ್ತಾರೆ. ಯುವವಿದ್ವಾಂಸರುಗಳಿಗೆ ಸಂಶೋಧನಾ ಕ್ರಮವನ್ನು ಬೋಧಿಸಿದ ಇವರು ಅತ್ಯಂತ ಸರಳ ಹಾಗೂ ಸಾಧು ಸ್ವಭಾವದವರು. ಶ್ರೀಮಠದ ಸಭೆಯಲ್ಲಿ ಪಾಲ್ಗೊಂಡು ಅನೇಕ ವರ್ಷಗಳ ಕಾಲ ವಾಕ್ಯಾರ್ಥದಿಂದ ಸಭೆಯನ್ನು ರಂಜಿಸಿದವರು. ನಮ್ಮ ಮಠದ ''ಶ್ರೀ ಗುರುಸಾರ್ವಭೌಮ'' ಮಾಸಪತ್ರಿಕೆಗೆ ಅನೇಕ ವರ್ಷಗಳ ಕಾಲ ಸಂಪಾದಕರಾಗಿ ಸೇವೆ ಸಲ್ಲಿಸಿದ್ದರು.

ಇವರು ಮಾಡಿರುವ ಅನುವಾದವು ಕಾವ್ಯಾಧ್ಯಯನಶೀಲರಿಗೆ ತುಂಬಾ ಉಪಕೃತವಾಗಿದೆ. ಶ್ಲೋಕ- ಪದವಿಭಾಗ - ಅನ್ವಯ - ಪದಶಃ ಅರ್ಥ - ತಾತ್ಪರ್ಯ - ವಿಗ್ರಹ - ಧಾತು - ಶಬ್ದಗಳು - ಕೋಶ - ಛಂದಸ್ಸು - ಅಲಂಕಾರ ಹೀಗೆ ಎಲ್ಲಾ ವಿಚಾರಗಳೂ ಸುಲಲಿತವಾಗಿ ತಿಳಿಯುವಂತೆ ಅನುವಾದಿಸಿದ್ದಾರೆ. ಇಂತಹ ಅದ್ಭುತವಾದ ಈ ಮಹಾಕಾವ್ಯವನ್ನು ಇದೇ ಮೊದಲಬಾರಿಗೆ ಪುಸ್ತಕ ರೂಪದಲ್ಲಿ ಶ್ರೀಮಠವು ಪ್ರಕಾಶನಗೊಳಿಸುತ್ತಲಿದೆ.